ನವೋದಯ ಪ್ರಚಾರ ಪುಸ್ತಕಮಾಲೆ—೨೧

# ಕಯ್ಯಾರ ಕಿಞ್ಞಣ್ಣ ರೈ

ಟಿ. ಎಸ್. ಶರ್ಮಾ



ಮಹಾತ್ಮಾ ಗಾಂಧಿ
ಮೆಮೋರಿಯಲ್ ಕಾಲೇಜು
ಉಡುಪಿ 2.

ಸರ್ವೋದಯ ಪ್ರಚಾರ ಪುಸ್ತಕಮಾಲೆ—೨೧

# ಕಯ್ಯಾರ ಕಿಞ್ಞಣ್ಣ ರೈ

ಕೆ. ಎಸ್. ಶರ್ಮಾ



ಮಹಾತ್ಮಾ ಗಾಂಧೀ ಮೆಮೋರಿಯಲ್ ಕಾಲೇಜು
ಉಡುಪಿ ೨.

## ಸಂಪಾದಕ ಮಂಡಳಿ

ಪ್ರೊ। ಕು. ಶಿ. ಹರಿದಾಸ ಭಟ್ಟ, ಎಂ. ಎ., ಪ್ರಧಾನ ಸಂಪಾದ

ಶ್ರೀ ಎಸ್. ಕೆ. ಶ್ರೀಪತಿ ಆಚಾರ್ಯ, ಎಂ. ಎ., ವಿದ್ವಾನ್

ಶ್ರೀ ಎನ್. ತಿರುಮಲೇಶ್ವರ ಭಟ್ಟ, ಎಂ. ಎ.



ಮೊದಲನೆಯ ಮುದ್ರಣ ೧೯೭೧



ಬೆಲೆ : ೫೦ ಪೈಸೆ

ಮುದ್ರಕರು : ಯಸ್. ನಾರಾಯಣರಾವ್,
ಉದಯ ಪ್ರಿಂಟರ್, ಮಂಗಳೂರು-3.
ಫೋನ್ : 3815.

# ನವೋದಯ ಪ್ರಚಾರ—ಇಂದು

ನಮ್ಮ ನವೋದಯ ಪ್ರಚಾರ ಪುಸ್ತಕ ಮಾಲೆ ಕಾಲೇಜಿನ ವಾರ್ಷಿಕ ಸಾಹಿತ್ಯೋತ್ಸವ ಸಂದರ್ಭದಲ್ಲಿ ಮಾಡಿದ ಭಾಷಣಗಳನ್ನು ಮಾತ್ರವೇ ಅಲ್ಲದೆ ಕನ್ನಡ ಸಾಹಿತಿ-ಕಲಾವಿದರ ಕುರಿತು ಲಿಖಿತ ಪ್ರಬಂಧಗಳನ್ನೂ ಪ್ರಕಟಿಸಲು ತೊಡಗಿ ಹದಿನೈದು ವರ್ಷಗಳಾದುವು. 'ಲಾಭ ಬೇಡ, ನಷ್ಟವಿಲ್ಲ' ಎಂಬ ಆರ್ಥಿಕ ತಳಹದಿಯಲ್ಲಿ ಕಾಲೇಜು ಕೈಗೊಂಡ ಈ ಪ್ರಕಟನ ಸಾಹಸಕ್ಕೆ ಕನ್ನಡಿಗರು ಸಾಕಷ್ಟು ಪ್ರೋತ್ಸಾಹ ನೀಡಿದ್ದಾರೆ.

ಪ್ರಕಟನೆಯ ಬಗ್ಗೆ ನಾವು ಯಾವ ನಿಯಮಿತತೆಯನ್ನೂ ಇಟ್ಟುಕೊಂಡಿಲ್ಲವಾದರೂ ಇದುವರೆಗೆ ಸುಮಾರು ಹದಿನೈದು ಪುಸ್ತಕಗಳು ಅಚ್ಚಾಗಿವೆ. ಅದರಲ್ಲಿ ಎಷ್ಟೋ ತೀರಿವೆ. ಮುಂಬರುವ ಜಿಲ್ಲಾ ಸಾಹಿತ್ಯ ಸಮ್ಮೇಳನದ ನೆಪದಲ್ಲಿ ಮತ್ತೊಮ್ಮೆ ಈ ಜಿಲ್ಲೆ ಕನ್ನಡ ನಾಡಿನ ಸೇವೆಗೆ ಅಣಿಗೊಳಿಸಿದ ಮಹನೀಯರ ಪರಿಚಯವನ್ನು ಪ್ರಾಂಕ್ತವಾಗಿ ಪ್ರಕಟಿಸಬೇಕೆಂಬ ನಮ್ಮ ಆಶಯ ದೊಡ್ಡದೆ. ಹಲವು ಮಂದಿ ಲೇಖಕರು ಇದರಲ್ಲಿ ಸಹಕರಿಸಿದ್ದಾರೆ. ಇದುವರೆಗೆ ಪ್ರಕಟಿತವಾದ (ಮರುಪ್ರಕಟಿತವಾದ) ಗೋವಿಂದ ಪೈ, ಕಡೆಂಗೋಡ್ಲು, ಸೇಡಿಯಾಪು, ಕಾರಂತ ಅವರ ಜತೆಗೆ ಮುಳಿಯ ತಿಮ್ಮಪ್ಪಯ್ಯ, ಪಂಜೆ ಮಂಗೇಶ ರಾವ್, ಹುರುಳಿ ಭೀಮರಾವ್, ಉಗ್ರಾಣ ಮಂಗೇಶ ರಾವ್, ಎಸ್. ವೆಂಕಟರಾಜ, ಕಯ್ಯಾರ ಕಿಞ್ಞಣ್ಣ ರೈ, ಅವರನ್ನೂ

ಪೋಣಿಸಿದ ಬಳಿಕ ಜಿಲ್ಲೆಯ ಸಾಹಿತ್ಯ ವ್ಯವಸಾಯದ ಒಂದು ಸಮಗ್ರ ಚಿತ್ರ ಮೂಡುವುದೆಂದು ನಾವು ಆಶಿಸಿದ್ದೇವೆ.

ಪುಸ್ತಕ ಪ್ರಕಟನೆಯ ಲೇಖಕರು ಮಾಲೆಯ ಇತಿಮಿತಿ ಮತ್ತು ನಿಯಮಿತ ಅವಧಿಯೊಳಗೇನೆ ತಮ್ಮ ಕೃತಿಯನ್ನು ರಚಿಸಿ ಉಪಕರಿಸಿದ್ದಾರೆ. ಅವರಿಗೂ, ಸುಂದರವಾಗಿ ಮುದ್ರಿಸಿಕೊಟ್ಟ ಉದಯ ಪ್ರಿಂಟರಿ, ಕೊಡಿಯಾಲ್‌ಬೈಲ್, ಮಂಗಳೂರು-3. ಅವರಿಗೂ ನಮ್ಮ ಕೃತಜ್ಞತೆ.

ಅಕ್ಟೋಬರ-27, 1971

**ಕು. ಶಿ. ಹರಿದಾಸ ಭಟ್ಟ**
ಪ್ರಧಾನ ಸಂಪಾದಕ

# ಶ್ರೀ ಕಯ್ಯಾರ ಕಿಞ್ಞಣ್ಣ ರೈ.

## ಭಾಗ ೧

ಸಪ್ತಂಬರ ಹದಿನೆಂಟರಂದಿನ ಅಪರಾಹ್ಣ. ರೈಗಳ ಭೇಟಿಗಾಗಿ ಪೆರಡಾಲಕ್ಕೆ ತೆರಳಿದ್ದೆ; ಸದಾ ಒಂದಲ್ಲೊಂದು ಕಾರ್ಯದಲ್ಲಿ ವ್ಯಾಪೃತರವರಿದ್ದುದರಿಂದ, ಭೇಟಿಯ ಕಾಲವನ್ನು ಮೊದಲೇ ಗೊತ್ತುಹಚ್ಚಿಕೊಂಡಿದ್ದೆನು.

ಅಂದು ಶಾಲಾ ದಿನವಾಗಿರಲಿಲ್ಲ. ಪೂರ್ವಾಹ್ಣ ಕಾಸರಗೋಡಿಗೆ ಬಂದಿದ್ದ ರೈಗಳು, ತನ್ನ ಕೆಲಸವನ್ನೆಲ್ಲ ಅವಸರ-ಅವಸರವಾಗಿ ಪೂರೈಸಿಕೊಂಡು, ನಾನು ಪೆರಡಾಲಕ್ಕೆ ತಲುಪುವ ಕೊಂಚ ಮೊದಲೇ, ಬಂದಿದ್ದು ಪಂಚಾಯಿತ್ತು ಆಫೀಸಿನಲ್ಲಿ ನನಗಾಗಿ ಕಾದು ಕುಳಿತಿದ್ದರು.

ನನ್ನನ್ನು ಕಾಣುತ್ತಲೆ, ಕೈತುಂಬ ಪುಸ್ತಕಗಳ ಹೊರೆಯನ್ನು ಹೊತ್ತ ಅವರು ನೇರಾಗಿ ನನ್ನ ಬಳಿ ಬಂದು "ಮನೆಗೆ ಹೋಗೋಣ" ಎಂದರು. ನಾನವರನ್ನು ಬಳಿವಿಡಿದೆ.

ಬೆಟ್ಟ ಗುಡ್ಡಗಳೆಡೆಯಿಂದ, ಸುಮಾರು ಒಂದು ಮೈಲಿ ದೂರದ ದಾರಿ. ಏರಿಳಿತಗಳಿಂದ ಕೂಡಿದ ವಂಕಿ-ವಂಕಿಯಾದ ಇಳಿಯಲ್ಲಿದೆ ರೈಗಳ ಮನೆ; ಅದಕ್ಕೂ ಕೆಳಗೆ ಹುಲುಸಾದ ಹೊಲಗಳನ್ನು ಮುಂದಿರಿಸಿಕೊಂಡು. ಹಳ್ಳಿಯ ವಾತಾವರಣಕ್ಕೆ ಒಡ್ಡಿನಿಂತ ಮನೆಯಾದರೂ, ಸಂದರ್ಶಕರನ್ನು ಸ್ವಾಗತಿಸಲೊಪ್ಪುವ ಅಚ್ಚುಕಟ್ಟು ಮನೆಯ ಜಗಲಿಯನ್ನು ಕೂಡಿಕೊಂಡಿತ್ತು. ಆ ಜಗಲಿ ಕಾವ್ಯ ತಪೋವನದ ಆಶ್ರಮ ದ್ವಾರವೆಂದರೂ ಹೆಚ್ಚಾಗದು.

ನಾನವರಿಗೆ ಅಪರಿಚಿತನಲ್ಲ. ವರ್ಷಗಳ ಹೊಕ್ಕು ಬಳಕೆ ನಮ್ಮಲ್ಲಿದೆ. ಆದರೆ ಆ ಮನೆಗೆ, ಆ ವಾತಾವರಣಕ್ಕೆ ನಾನು ತೀರಾ ಹೊಸಬ.

ಮನೆಗೆ ಬಂದವನನ್ನು ಯಥೋಚಿತವಾಗಿ ಆದರಿಸುವಲ್ಲಿ ರೈಗಳು ಸಭ್ಯ ಗೃಹಸ್ಥ. ಕೈ-ಕಾಲುಗಳನ್ನು ತೊಳೆದುಕೊಂಡು ಮನೆಯೊಳಗೆ ಬಂದ, ನಾನೂ ಅವರೂ ಪಕ್ಕದಲ್ಲೆ ಕುಳಿತು, ಅರ್ಧವಾಗಿ ಉಳಿದಿದ್ದ ಸಂಭಾಷಣೆಯನ್ನು ಮುಗಿಸಿಕೊಳ್ಳತೊಡಗಿದೆವು. ಪೇಟೆಯಿಂದ ಕಾರಿನಲ್ಲಿ ಬಂದುದರಿಂದ ಮನೆಗೆ ತಲಪುವಾಗಲೇ ಮಾತು ಅರ್ಧದಲ್ಲಿ ತಡೆದಿತ್ತು.

ತುಸು ಹೊತ್ತಿನಲ್ಲೆ ಒಳಗಿನಿಂದವರ ಚಿರಂಜೀವಿಗಳು ಕಾಫಿ-ತಿಂಡಿ ತಟ್ಟೆಗಳನ್ನು ತಂದರು. ಅವನ್ನು ರೈಗಳೆ ನನ್ನ ಮುಂದಿರಿಸಿದರು. ತರಗು ಚಕ್ಕುಲಿ, ಸವಿ ಬಿಸ್ಕತ್ತುಗಳನ್ನು ಸವಿದೆವು; ಆ ದಿನದ ಹಸಿಮಳೆಯ ಜಾಡ್ಯವನ್ನು, ರುಚಿಯಾದ ಬಿಸಿ ಕಾಫಿ ದೂರ ಸರಿಸಿತು.

ಮೇಜು ತುಂಬ ಓರಣವಾಗಿ ಇರಿಸಿದ್ದ ಪುಸ್ತಕಗಳನ್ನು ಮಧ್ಯದಲ್ಲಿರಿಸಿಕೊಂಡು ಕುಳಿತಿದ್ದ ನಾವು ಮಾತಿಗೆ ಮೊದಲಿಟ್ಟೆವು. ಯೋಗಕ್ಷೇಮದ ವಾರ್ತಾಲಾಪದಿಂದ ಮತ್ತೆತ್ತಲೋ ದೂರ ಸರಿದ ಮಾತದು. ಕಾಸರಗೋಡಿನ ಕನ್ನಡ ಚಟುವಟಿಕೆ, ಪ್ರಾಚೀನ ಸಾಹಿತ್ಯ-ನವ್ಯ ಸಾಹಿತ್ಯ ಮೊದಲಾದ ಹತ್ತಾರು ವಿಚಾರಗಳು ಮಿಂಚಿನಂತೆ ಮಿಂಚಿದುವು. ನಿಮಿಷಗಳಲ್ಲಿ ವಿರಮಿಸಿದ ಮಾತುಗಳವಾದರೂ, ತುಂಬು ಸ್ವಾರಸ್ಯದ ಸೆಲೆಯುಳ್ಳದ್ದವು. ಸಮರ್ಥ ವಿಮರ್ಶೆಯ ಕಾವೂ ಅದರಲ್ಲಿತ್ತು.

* * * *

ನನ್ನ ಭೇಟಿಯ ವಿಚಾರವನ್ನರಿತಿದ್ದ ರೈಗಳು, ತನ್ನ ಕುರಿ

ತಾಪ ಮಾತುಗಳನ್ನಾಡತೊಡಗುತ್ತಿದ್ದಂತೆ, ತನ್ನೆದೆಯು ಮಾತ್ರ ಸವಿಯುಬಲ್ಲ ನೆನಹಿನ ವೀಣೆಯನ್ನು ಮೀಟುತ್ತಿದ್ದಂತೆ ನನಗನಿಸಿತು; ಕೈಬೆರಳುಗಳು ನಾದದ ಏರಿಳಿತಗಳನ್ನು ಗುರುತಿಸುತ್ತಿದ್ದುವು.........

ರೈಗಳು ತಾನು ಕುಳಿತೆಡೆಯಿಂದ ಮೇಲೆದ್ದು, ನನ್ನನ್ನವರ ಬಳಿ ಕರೆದರು; ದೂರಕ್ಕೆ ಬೆಟ್ಟುದೋರಿದರು. ಜಗಲಿಯಿಂದ ಉನ್ಮುಖರಾಗಿ ನಿಂತ ಅವರ ನಿರ್ನಿಮೇಷವಾದ ನೋಟವನ್ನೆ ನಾನು ಅನುಸರಿಸಿದೆ. ತುಸುದೂರದಲ್ಲಿ ಗುಡ್ಡದ ಮೇಲೆ ತಲೆಯೆತ್ತಿ ನಿಂತಿದೆ 'ವಿದ್ಯಾಮಂದಿರ'ವೊಂದು. ಈಗಿನ ಹೆಸರಿನಲ್ಲಿ ಕರೆಯುವುದಾದರೆ ಅದು "ವಿದ್ಯಾಗಿರಿಯ ಅನಂತ ಭಟ್ಟ ಸ್ಮಾರಕ ಶಾಲೆ".

ಇಂದದು ವಿದ್ಯಾಗಿರಿಯಂತೆ. ಹಿಂದದು ಅಂಗಾರಪದವು. ಹಗಲಲ್ಲೆ ಗುಳಿಗನ ಸಂಚಾರದ ಸ್ಥಳವೆಂದು ಅಳುಕಿ ಜನಸಂಚಾರವೆ ಕುಸಿದ ಜಾಗವದು. "ಕಡಾರು--ಮುನಿಯೂರು"ಗಳೆಂಬ ಪ್ರದೇಶಗಳನ್ನೊಳಗೊಂಡ, ತೀರ ಹಿಂದುಳಿದ ಈ ಪದವಿನಲ್ಲಿ ವಿದ್ಯಾಲಯ ಮೂಡಿ ಬಂತು; ನೂರಾರು ಮಕ್ಕಳ ಓದಿಗನು ಅನುವು ನೀಡಿತು. ಹಳ್ಳಿಯ ಜನ ನಿರ್ಭೀತಿಯ ಹೆಜ್ಜೆಗಳನ್ನಿರಿಸಿ ಸಾಗುವಂತಾಯಿತಂತೆ. ಇಂದಾ ಶಾಲೆ, ಆ ಹಳ್ಳಿಯ ಬಾಳಿನ ದೀಪ!

ರೈಗಳಿಗಾ ಶಾಲೆಯ ಮೇಲೆ ಅಪಾರವಾದ ಮಮತೆ. ತನ್ನ 'ಕಾಮಧೇನು' ಎಂದವರದನ್ನು ಗೌರವಿಸುತ್ತಾರೆ. ಪ್ರತಿ ದಿನದ ಸುಪ್ರಭಾತದಲ್ಲಿ ಅದನ್ನು ನೋಡುವುದು ತನಗೊಂದು ಹಿಗ್ಗು ಎಂದವರು ಅಭಿಮಾನಿಸುತ್ತಾರೆ.

ತನ್ನ ಜೀವನವನ್ನು ವಿದ್ಯೆಯುಣಿಸಿಂದ ಬಳೆಯಿಸಿ, ಮಾನ

ವೀಯತೆಯನ್ನು ತುಂಬಿದ-"ಗುರು"ವಿನ "ಭವ್ಯ ಸ್ಮರಣೆಯನ್ನರಳಿಸುವ, ಅಂತಶ್ಶಕ್ತಿಯನ್ನು ಬಲಿಯಿಸುವ, ಶುಭಾನುಗ್ರಹವನ್ನು ನೀಡುವ" **'ಕಲ್ಪತರು'** ಎಂಬ ಭಕ್ತಿಭಾವ ರೈಗಳಿಗಿದೆ-- ಆ ವಿದ್ಯಾಮಂದಿರದಲ್ಲಿ!

ತಾನು ಪಂಚಾಯ್ತಿ ಅಧ್ಯಕ್ಷನಾಗಿ ಆಯ್ಕೆಗೊಂಡ ಕಾಲದಲ್ಲಿ, ಗುರುಕಾಣಿಕೆಯಾಗಿ ಸಲ್ಲಿಸಬೇಕೆಂದಿದ್ದ ಈ ಯೋಜನೆಯಲ್ಲಿ ತನ್ನ ಪಂಚಾಯ್ತಿ ನೀಡಿದ್ದ ನೆರವನ್ನು ರೈಗಳು ಸಂತೋಷದಿಂದ ತಿಳಿಸಿದರು. ದಿ। ಅನಂತ ಭಟ್ಟರು ಕೇವಲ ಶಾಲಾಧ್ಯಾಪಕರಾಗಿರಲಿಲ್ಲ. ಓದಿನಲ್ಲಿ ತೀರಾ ಹಿಂದುಳಿದಿದ್ದ ಈ ಪ್ರದೇಶದಲ್ಲಿ ಮನೆ-ಮನೆಗೂ ತೆರಳಿ, ವಿದ್ಯಾ ಶಂಖಧ್ವನಿಯನ್ನು ಮೊಳಗಿ ಎಚ್ಚರಗೊಳಿಸಿದವರು; ಶಿಷ್ಯರ ಶ್ರೇಯಸ್ಸನ್ನು ಹಾರೈಸಿದವರು; ಅವರ ಹಿರಿತನವನ್ನು ಇಂದಿಗೂ ಈ ಪ್ರದೇಶ ಮರೆತಿಲ್ಲ

ವಿದ್ಯಾಗಿರಿಯನ್ನು ತೋರಿ, ಅದರ ಇತಿವೃತ್ತವನ್ನು ಸೂಕ್ಷ್ಮವಾಗಿಯಾದರೂ ತಿಳಿಯಾಗಿ ತಿಳಿಸಿದ ಬಳಿಕ, ನಾನವರ ಮಾತಿನ ನಾಂದಿಯನ್ನು ಚೆನ್ನಾಗಿ ಅರಿತುಕೊಂಡೆನು. ಅದು ಕೃತಜ್ಞತೆಯ ಇಲ್ಲವೆ ಪ್ರಾರ್ಥನೆಯ ಸಂಕೇತ.

ಅವರು ಹಸನ್ಮುಖರಾಗಿ ನನ್ನತ್ತ ನೋಡಿದರು.

ನನ್ನ ಕಾರ್ಯಕ್ಕೆ ನಾನೂ ಬೇಕೆಂದೇ ನಾಂದಿ ಹಾಡಿದೆ! ರೈಗಳೆ, ಈ ಬಗೆಯ (ಯಾವುದೆಂದು ತಿಳಿಸಲಿಲ್ಲ) ಕಾವ್ಯ ಪ್ರೇರಣೆಗೆ, ನಿಮಗೆ ದೊರಕಿದ ಸನ್ನಿವೇಶವೇನಾದರೂ ಇದೆಯೆ?

'ರೈಗಳಿಗೀ ಪ್ರಶ್ನೆ ತುಸು ಅಶ್ಚರ್ಯವನ್ನುಂಟುಮಾಡಿರಬೇಕು... ಉತ್ಸಾಹದಿಂದ ಒಮ್ಮೆ ಮೇಲೆದ್ದರು ರೈಗಳು. 'ಕಿಞ್ಞಣ್ಣ'ನೆಂಬ ಹೆಸರನ್ನೇ ನಾಚಿಸುವ ಅವರ ನಿಲುವನ್ನು ಆಗ ನೋಡಬೇಕು. 'ಕಿಞ್ಞಣ್ಣ'ನಾದರೂ ನನ್ನ ದೃಷ್ಟಿಗವರು 'ಮಲ್ಲಣ್ಣ'ನಾಗಿ ತೋರಿದರು. ಆ ಬೃಹದಾಕಾರ, ಪ್ರತಿಭೆಯನ್ನು

ಮುಕ್ಕುಳಿಸುತ್ತಿರುವ ದೀಪ್ತಿಮಂತಗಳಾದ – ಅನ್ವೇಷಕ ನೇತ್ರಗಳು ಆತ್ಮೀಯತೆಯ ಮಧುಮಂದಾರವನ್ನರಳಿಸುತ್ತಿರುವ ಮುಗುಳ್ನಗೆ ಇವು ಆ ನಿಲುವಿಗೆ ಒಪ್ಪ ವೇರಿಸಿದ್ದುವು.

"ಎಲ್ಲಿಂದ ಎಲ್ಲಿಗೋ ನನ್ನನ್ನು ಒಯ್ದಿರಿ ನೀವು" ಎಂದರವರು ನಗುತ್ತ.

ನೀರ್ಚಾಲಿನ ಮಹಾಜನ ಸಂಸ್ಕೃತಕಾಲೇಜಿನಲ್ಲಿ ತನಗೆ ದೊರಕಿದ ಪಂಡಿತೋತ್ತಮರ ಸಂಪರ್ಕ, ಅಧ್ಯಾಪನ,--ಸಂಸ್ಕೃತ ಕನ್ನಡ ಸಾಹಿತ್ಯಗಳಲ್ಲಿನ ಅಮರಗಳಾದ ಶ್ಲೋಕಗಳನ್ನು ಪದ್ಯಗಳನ್ನು ಓದಿ ಕಂಠಪಾಠ ಮಾಡಿ, ಅವುಗಳ –ನಾದಸರಣಿ--ತನ್ನ ಮುನ್ನಡೆಗೆ ಸಹಾಯಕವಾದುದನ್ನು–ನಿರವಿಸಿದ ರೈಗಳು, ಆ ಕಾಲದಲ್ಲಿ ತನ್ನೊಡನಾಡಿಗಳಾಗಿದ್ದ 'ನಂಬೂದಿರಿ -- ನಾಯರ'ರು ಕೇರಳದ ಹಿರಿಯ ಕವಿಗಳಾದ 'ವಳ್ಳತ್ತೋಳ್–ಉಳ್ಳೂರು' ಮೊದಲಾದವರು ಬರೆದ ಕವನಗಳನ್ನು ಖಂಡ ಕಾವ್ಯಗಳನ್ನು ಓದಿ ಕೇಳಿಸಿ, ತನ್ನೆದೆ ಹರುಪೇರುವಂತೆ ಮಾಡಿದ ಸುವರ್ಣ ಸಂಧಿಗಳನ್ನು ಒಂದೊಂದಾಗಿ ತೆರೆದು ಆವೇಶಪೂರ್ಣವಾಗಿ ಓದಿದರು.

ಕುಂಬಳೆ ಸೀಮೆಯ ಜನಪ್ರಿಯ ಯಕ್ಷಗಾನದ ಗೀತಗಳನ್ನು ಕೇಳಿದ, ಬಯಲಾಟಗಳನ್ನು ಮನದಣಿಯೆ ನೋಡಿದ-- ಅವಕಾಶವನ್ನು ಸ್ಮರಿಸಿದ ರೈಗಳು, ಪಾರ್ತಿಸುಬ್ಬ--ಮುದ್ದಣ– ಇವರು, 'ಪುರಾಣಾಂತ ಗಣಿತಗಳಾದ ಕತೆಗಳನ್ನು, ಹೆಣೆದು ರಚಿಸಿದ್ದ 'ಪ್ರಸಂಗಗಳ' ಓದು ತನ್ನಲ್ಲಿ ದೇವರು ಕರುಣಿಸಿದ್ದ ಕವಿತಾವಾಸನೆಗೆ ಗುರಿಮಾಡಿಸಿದ ಭಾಗ್ಯವನ್ನು--ರೋಮಾಂಚಿತರಾಗಿ ತಿಳಿಸಿದರು; ನಾನು ಮುಗ್ಧನಾಗಿ ಕೇಳಿದೆ.

ಒಂದು ದಿನ ರೈಗಳು ಹಾಡಿದರಂತೆ! ಆ ಹಾಡು "ನೀನು ನನ್ನ ಭಾವನೆಯಲಿ"

"ಪ್ರೇಮಜಲತರಂಗದಲ್ಲಿ, ಅದರೊಳವಿತ ಭಾವನೆಯಲಿ
ಭಾವಿಸಿರ್ಪ ಎದೆಯ ತಳದಿ ರಾಜ್ಯಕಟ್ಟಿ ನಿಲಿಸಿಹೆ
ಅಲ್ಲಿ ನಿನ್ನ ಅಮರಗಾನ ಇಂದು ಕಾಂಬೆನದರ ತಾಣ
..................................

ಮನದ ರಾಜ್ಯದಲ್ಲಿ ಸುಖಿಪ ಧನ್ಯನಾನು-ನಿನ್ನ ವೇಣು"

ಮಂಗಳೂರಿನ 'ಸ್ವದೇಶಾಭಿಮಾನಿ' ಪತ್ರಿಕೆಯಲ್ಲಿ ಇದು ಬಂದಾಗ ರೈಗಳು ಅತ್ಯಾನಂದಗೊಂಡರಂತೆ. ಅವರ 'ಸ್ವಗತ' ಗೀತ ಹೀಗೆ ಹೇಳುತ್ತದೆ . . . .

"ಅಚ್ಚಾಗಿ ಬರುವಾಗ ಹುಚ್ಚಾಗಿ ಹೋಗಿಹೆನು
ನೆಲವ ಬಿಟ್ಟೇರಿಹೆನು ಬಾನಿನೆಡೆಗು"

ಅಂದಿನಿಂದ ಸಶ್ರದ್ಧರಾಗಿ ಓದಿ "ದುರ್ಗಾದಾಸ" ನೆಂಬ ಹೆಸರಿನಲ್ಲಿ ಭಾವನೆಗಳು ವ್ಯಕ್ತಗೊಳಿಸಿದ ರೂಪಗಳನ್ನು ರೈಗಳು ರೇಖಿಸಿದರಂತೆ.

* * * *

ಕೊಂಚ ಬಿಡುವು. ದಣಿವನ್ನರಿಯದ ವ್ಯಕ್ತಿಗೇಕೆ ಬಿಡುವು? ದಿನದ ಇಪ್ಪತ್ತನಾಲ್ಕು ಗಂಟೆಗಳೂ ಸಾಲವೆಂಬಂತೆ ಕೈತುಂಬ, ಮನತುಂಬ ಉದ್ಯಮವನ್ನು ಬಯಸಿ, ಸದಾ ದುಡಿತದಲ್ಲೇ ಸಂತೋಷವನ್ನು ಕಾಣುವವರು ರೈಗಳು!

"ದುಡಿತವೇ ನಮ್ಮ ದೇವರು, ಲೋಕ ದೈವಕುಲ
ಬೆವರೇ ಹೂ ಹಣ್ಣು-ಕಣ್ಣೀರೆ ತೀರ್ಥಂ" ಎಂಬ ತನ್ನವೇ ನುಡಿಗಳನ್ನು ಅಕ್ಷರಶಃ ಯಥಾರ್ಥವಾಗಿಸುವ ರೈಗಳನ್ನು ವಿಶ್ರಾಂತಿಯ ಮುಖಕ್ಕೆ ವಿಪರೀತರಿಸುವುದನ್ನು ಲಕ್ಷಿಸಿ "ರೈಗಳೆ,

ಒಂದಿಷ್ಟು ನಿಮ್ಮ ಜೀವನದ ಸಿಹಿ-ಕಹಿಗಳನ್ನು ಬಿಡಿಸುವಿರಾದರೆ” ಎಂದೆ.

ರೈಗಳಾರಂಭಿಸಿದರು– ಎತ್ತರವಾದ ಗಂಭೀರವಾದ ಆಕೃತಿಗೆ ತಕ್ಕಂತಿರುವ ನುಡಿಗಳೊತ್ತಿನಲ್ಲಿ.

“ಶ್ರೀ ಮುಖದ ‘ಸ್ವಗತ’ದಲ್ಲಿ ನನ್ನನ್ನು ಕಾಣಿಸಿದ್ದೇನೆ– ಆದರೆ ಅಲ್ಲಿ ನನ್ನ ಸಂವೇದನೆ ಅಲ್ಲಲ್ಲಿ ಮಿಂಚಿ, ಮರೆಯಾಗಿದೆಯಷ್ಟೆ. ನೀವು ಹಾರೈಸುವ ಪೂರ್ಣ ರೂಪ ಅಲ್ಲಿರದು”-ಎಂದನ್ನುತ್ತ ದಶಕಗಳ ಹಿಂದೆ -- ಹಿಂದೆ ನನ್ನನ್ನವರು ಒಯ್ದರು. ಉತ್ಸಾಹದಿಂದ ನಾನು ತೆರಳಿದೆ.

*   *   *   *

1915ರ ಜೂನ್ ತಿಂಗಳ 8ರಂದು ಅವರು ಪೆರಡಾಲದಲ್ಲಿ ಜನಿಸಿದರು. ತಾಯಿ ದೈಯಕ್ಕು; ತಂದೆ ದುಗ್ಗಪ್ಪರೈ. ಕಲ್ಲಿಕಳೆಯ ಅವರ ಊರು ತಂದೆಯಿಂದ ಯಾವುದೇ ಸುಖವನ್ನವರು ಕಾಣಲಿಲ್ಲವಂತೆ. ಕಾರಣ “ಊರಿಗೇ ಉಪಕಾರಿ ಮನೆಗೊಂದು ಮಾರಿ” (ಸ್ವಗತ) ಎನ್ನುವಂತಿತ್ತು ತಂದೆಯ ಗುಣ.

ಪ್ರಪಂಚವನ್ನು ಕಂಡರಿವ ಪ್ರಾಯದ ಮೊದಲಲ್ಲಿ, ಮಂಗಲಪಾಡಿಯ-ಕಯ್ಯಾರದಲ್ಲಿ, ತನ್ನ ಹಕ್ಕಿನ ಆಸ್ತಿಯಲ್ಲಿ ಬಾಲ್ಯವನ್ನು ಕಳೆದರು. ಅವರದು ಅಳಿಯಕಟ್ಟಲ್ಲವೆ? ಸೋದರಮಾವನಾದ ದಿ। ಶಂಕರಾಳ್ವರು ಬಾಳಿಗೆ ದೀವಿಗೆ ತೋರಿದವರಾದರೆ, ಅಜ್ಜ ದಿ। ಶಂಕರಾಳ್ವರು ಮೊಮ್ಮಗನನ್ನು ಅರೆಕ್ಷಣ ಅಗಲಿರದ ವ್ಯಕ್ತಿಯಾಗಿದ್ದರು. ಮೊಮ್ಮಗನಲ್ಲಿದ್ದ ‘ಕವಿತಾವಾಸನೆ’ಗೆ ಅವರೂ ಪ್ರೋತ್ಸಾಹದ ನೀರೆರೆದವರೆ!

“ಅಶ್ವಧಾಟಿಯ ಹಿಡಿದು ನಮ್ಮಜ್ಜ ಜೈಮಿನಿಯ
ಓದುತಿರೆ, ಸರಸತಿಯೆ ಕುಣಿಯಬೇಕು”

ತನ್ನಜ್ಜನ ಹಿರಿತನವನ್ನು ಹೀಗೆ ಹಾಡಿದ್ದಾರೆ ರೈಗಳು
'ಸ್ವಗತ'ದಲ್ಲಿ.

* * * *

ಬಾಲ್ಯದ ಓದು ಪೆರಡಾಲದಲ್ಲಾಯಿತು. ಈ ಓದಿನ ಮಧ್ಯದಲ್ಲೆ, ಸಂಸ್ಕೃತದ ನವೋದಯಕ್ಕೆ ಈ ಪ್ರದೇಶದಲ್ಲಿ ನಾಂದಿಯನ್ನು ಹಾಡಿದ್ದ ಅಗಲ್ಪಾಡಿಯಲ್ಲಿನ ಸಂಸ್ಕೃತ ಪಾಠಾಲಯದಲ್ಲೂ ಒಂದೆರಡು ವರ್ಷಗಳು ಕಳೆದುವು. ಮುಂದಿನ ವ್ಯತ್ಯಸ್ತ ಓದಿಗದು ಓನಾಮವಾಗಿತ್ತು.

ಇಂಗ್ಲೀಷನ್ನು ಮೊಮ್ಮಗನಿಗೆ--ಅಳಿಯನಿಗೆ-ಓದಿಸುವ ಆಸೆ ಹಿರಿಯರಿಗೆ. ಆದರೆ ಆ ವಿದ್ಯೆ ಅಂದು ಶ್ರೀಮಂತರ ಸೊತ್ತಾಗಿತ್ತು. ಗುರುಗಳಾದ ದಿ| ಅನಂತ ಭಟ್ಟರ ಪ್ರೇರಣೆ ದೊರಕಿತ್ತಾದರೂ, ಆರ್ಥಿಕ ದುಃಸ್ಥಿತಿಯ ಮುಂದೆ ಓದಿನ ಮುಖ ಬದಲಿಸಿತು ಒಂದು ಸುದಿನದಲ್ಲಿ—

ಸೋದರಮಾವನು ಅಳಿಯನನ್ನು ನೀರ್ಚಾಲಿನ ಮಹಾಜನ ಸಂಸ್ಕೃತ ಕಾಲೇಜಿಗೆ ಕರೆದೊಯ್ದು, ದಿ| ವೆಂಕಪ್ಪ ಶರ್ಮರ ಕೈಗೆ ಒಪ್ಪಿಸಿದರು. ಶರ್ಮರು ಹಿರಿಯ ವಿದ್ವಾಂಸರು ಮಾತ್ರವಲ್ಲ, ಶಿಸ್ತು ಸಂಯಮಗಳ ಚೌಕಟ್ಟಿನಲ್ಲಿ ಶಿಷ್ಯ ಜೀವನವನ್ನು ರೂಪಿಸುತ್ತಿದ್ದ ಆದರ್ಶ ಅಧ್ಯಾಪಕರು.

'ಸಂಸ್ಕೃತದ' ಓದು ಆರಂಭವಾಯಿತು. 'ಈ ಭಾಷೆ ತನ್ನ ಕೈಗೆಟಕದು' ಎಂದು ಆರಂಭದಲ್ಲಿ ಬೆದರಿದ ರೈಗಳು ಒಮ್ಮೆ ನಿರಾಶರಾದರು. ಆದರೆ ಅದು ಕೇವಲ ಕೊಂಚಕಾಲ ಮಾತ್ರ.

"ಎಡವಿ ಬಿದ್ದರೇನದೊಮ್ಮೆ ಅಡಗದಂದು ನಡೆವ ಹೆಮ್ಮೆ" ಎಂಬಂತೆ ಧೃತಿಯನ್ನು ತಾಳಿದ ರೈಗಳು, ಸಂಸ್ಕೃತ ಕಾವ್ಯಗಳನ್ನು-ಅಲಂಕಾರ ಗ್ರಂಥಗಳನ್ನು ವ್ಯಾಕರಣ ನಿಯಮಗಳನ್ನು ಪಟ್ಟು

ಹಿಡಿದು ಕಂಠಪಾಠಮಾಡಿದರು. ಪ್ರಯೋಗವದು ಸಫಲವಾಯಿತು. ತರಗತಿಯಿಂದ ತರಗತಿಗೆ ಮುನ್ನಡೆದಂತೆ, ಕ್ರಮೇಣ ತರಗತಿಯಲ್ಲೆ ಮೊದಲಿಗರಾಗಿ ಅಧ್ಯಾಪಕರ ಮೆಚ್ಚಿನ ಶಿಷ್ಯರಾದರು.

ಎಂಟ್ರೆನ್ಸ್ ಪರೀಕ್ಷೆ ದಾಟಿದರು. ಸಂಸ್ಕೃತದಲ್ಲಿ ದೊರಕಿದ ಅಂಶಗಳೇ ಮೇಲುಗೈಯಾದವು. ಆದರೇನ:, ಜೀವನದ ನಿಟ್ಟನ್ನು ಪರಿಭಾವಿಸಿದ ರೈಗಳು, ಸಂಸ್ಕೃತ ಪ್ರಧಾನವಾಗಿರುವ 'ಶಿರೋಮಣಿ'ಯನ್ನುಳಿದು, ಉಭಯ ಭಾಷಾ ಸರಸ್ವತಿಯರನ್ನು ಒಲಿಸುವಂತಾಗಿಸುವ 'ಎ-ವಿದ್ವಾನ್' ತರಗತಿಯನ್ನು ನೆಚ್ಚಿದರು.

ಓದಿನೊಂದಿಗೆ ಜತೆಜತೆಯಾಗಿ, ದುರ್ಗಾದಾಸನೆಂಬ ಹೆಸರಿನಲ್ಲಿ ರೈಗಳು ಜಯ ಕರ್ಣಾಟಕ, ದೇಶಾಭಿಮಾನಿ, ರಾಷ್ಟ್ರಬಂಧು ಮೊದಲಾದ ಪತ್ರಿಕೆಗಳ ಮೂಲಕ ತನ್ನ ಕವಿತೆಗಳ ಮುಖವನ್ನು ಕಾಣತೊಡಗಿದರು. 'ಊರ್ಮಿಳಾ--ಬೆರೆವೆ ನಾನು ನನ್ನ ಜಗದಿ' ಮೊದಲಾದ ಕವಿತೆಗಳು ಹಿರಿಯರಿಂದ ಮೆಚ್ಚಲ್ಪಟ್ಟವು. ಅಂದು ಆ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ದಿ। ಆರೆಯ ನಡ್ಕ ಶಂಕರ ಶಾಸ್ತ್ರಿಗಳವರೂ ಶಿಷ್ಯನನ್ನು ಹರಸಿದ್ದರಂತೆ. ಶಾಸ್ತ್ರಿಗಳವರಿಂದ ಮೆಚ್ಚಿಕೆಯ ಮಾತನ್ನು ಗಳಿಸುವುದು ಅದು ಸುಲಭವೇನಲ್ಲ. ಅವರನ್ನು ಬಲ್ಲವರಿಗೀ ಮಾತು ಅರ್ಥವಾದೀತು.

* * *

1935ರಲ್ಲಿ ವಿದ್ವಾನ್ ಬಿರುದನ್ನು ಪಡೆದ ರೈಗಳು, ಮುಂದೆ ತನ್ನ ಜೀವನದಲ್ಲಿ ಬಹುಮುಖ ಕ್ರಾಂತಿಯನ್ನು ಕೆರಳಿಸಿದ್ದ ಮಂಗಳೂರು ನಗರಕ್ಕೆ ಬಂದರು. 3 ವರ್ಷಗಳ ಕಾಲ ಹೈಸ್ಕೂಲಲ್ಲಿ ಓದಿ ಎಸ್. ಎಸ್. ಎಲ್. ಸಿಯನ್ನು ಮುಗಿಸಿ, ಆ ಬಳಿಕ ಪತ್ರಿಕೋದ್ಯಮಿಯಾಗಿ ಜೀವಿಕೆಯನ್ನು ಕಾಣತೊಡ

ಗಿದರು. ಈ ವೃತ್ತಿ 1944ರ ವರೆಗೆ ರೈಗಳನ್ನು ಬಿಡುವಿರದ ಉದ್ಯಮದಲ್ಲಿ ಮುಳುಗಾಡಿಸಿತು.

ಒಂದೆಡೆ ಪ್ರಭಾತ ದಿನಪತ್ರಿಕೆಯ ಕಾರ್ಯಭಾರ; ಮತ್ತೊಂದೆಡೆ ಸ್ವದೇಶಾಭಿಮಾನಿ ವಾರಪತ್ರಿಕೆಯ ಗೌರವ ಚಿಂತನ...

ಈ ಮಧ್ಯದಲ್ಲಿ 'ನಿರಂಜನ'ರು ರೈಗಳಿಗೆ ಜತೆಗಾರನಾಗಿ ಸಿಕ್ಕಿದರು. ಅವರೊಂದಿಗೆ ಕೂಡಿ ನಡೆದು 'ಅಖಿಲ ಕರ್ಣಾಟಕ ಪತ್ರಿಕೋದ್ಯಮಿ ಸಂಘ'ದ ಜತೆ ಕಾರ್ಯದರ್ಶಿಯಾಗಿ ದುಡಿದು, ರಾಜಕೀಯ ಸಾಮಾಜಿಕ ರಾಷ್ಟ್ರೀಯ ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಪ್ರವೇಶಿಸಿ ಸಾಕಷ್ಟು ಪರಿಣತಿಯನ್ನು ಗಳಿಸಿದರು.

ಜತೆಗಾರನ ಗುಣವನ್ನು ನಿರಂಜನರೇ ಒಂದೆಡೆ ಹೀಗೆ ಹೇಳಿದ್ದಾರೆ- "ಅವರ ಸಾಮೀಪ್ಯ--ಸಂಸರ್ಗ ಯಾವಾಗಲೂ ಚೈತನ್ಯದಾಯಿ-ಸತ್ಯದ ಆರಾಧನೆ ಸಚ್ಚಾರಿತ್ರ್ಯ ಪ್ರಿಯತೆ, ವಜ್ರ ಕಾಠಿಣ್ಯ ಕುಸುಮ ಕೋಮಲತೆ-ಇವೆಲ್ಲ ಗುಣಗಳ ಎರಕವಾದ ಕವಿಜೀವನ ರೈಗಳದು! ಆಳ ವಿಸ್ತಾರಗಳನ್ನು ಸದಾ ಬಯಸುವ ಎತ್ತರದ ವ್ಯಕ್ತಿತ್ವ ರೈಗಳದು"-ಎಂದು. ನಿರಂಜನರ ಈ ಮಾತಿನ ಯಥಾರ್ಥವನ್ನು ರೈಗಳನ್ನು ಸಮೀಪಿಸಿದ ವ್ಯಕ್ತಿ ಮನಗಾಣ ದಿರನು. ಈ ಕಾಲದಲ್ಲಿ ರೈಗಳು ಖ್ಯಾತನಾಮರಾದ ಮೋರೆ ಹನುಮಂತರಾಯ, ಬಿ. ಎನ್. ಗುಪ್ತ, ಟಿ. ಟಿ. ಶರ್ಮಾ, ಮುಳಿಯ ತಿಮ್ಮಪ್ಪಯ್ಯ, ಕಡೆಂಗೋಡ್ಲು ಶಂಕರ ಭಟ್ಟ, ವಾಮನ ಭಟ್ ಮೊದಲಾದ ಹಿರಿಯ ರಾಜಕೀಯ ಧುರಂಧರರ ಸಾಹಿತ್ಯ ಶಕ್ತಿಗಳಾದ ಪಂಡಿತರ ಪರಿಚಯವನ್ನು ಗಳಿಸಿದರು. ಮಾತ್ರವಲ್ಲ-ಆಗ ಮಂಗಳೂರಲ್ಲಿ ಸಾಹಿತ್ಯ ಸೇವೆಯನ್ನೆಸಗುತ್ತಿದ್ದ ಮಿತ್ರಮಂಡಳಿಯಲ್ಲಿ ಕೂಡಿಯಾಡಿದರು; ತನ್ನ ಕೈಮನಗಳನ್ನು

ಹಿತವಾಗಿಸಿದರು; ಲೇಖನಿಯು ಪಳಗಿತು; ವಾಕ್‌ಶಕ್ತಿ ಬಲಿಯಿತು.

ಈ ತೆರನ ಉನ್ಮೇಷಕ್ಕೆ ಅದಕ್ಕೂ ಮೊದಲು ಪುತ್ತೂರಲ್ಲಿ ಶ್ರೀ ಶಿವರಾಮ ಕಾರಂತರ ಅಸದೃಶ ಸಾಹಸ--ಕೌಶಲಗಳ ಮೂರ್ತಿ ಮತ್ತಾಗಿದ್ದ, 'ದಸರಾ ಸಾಹಿತ್ಯೋತ್ಸವ'ದಲ್ಲಿ ಎಡೆಬಿಡದೆ ತೆರಳುತ್ತಿದ್ದುದು, ಕವಿಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದುದು- ಹಿರಿಯರ ಹರಕೆಯೊಂದಿಗೆ ಚೇತನವನ್ನು ಪಡೆಯುತ್ತಿದ್ದುದು ಕಾರಣವೆಂದು ರೈಗಳು ಹೇಳುತ್ತಾರೆ. ಅಂದಿನ ಆ ಉತ್ಸವ, ಒಂದು ಶುಭಸಂಧಿಯಲ್ಲಿ ಒಮ್ಮೆ ಕವಿಗೋಷ್ಠಿಗೆ ಅಧ್ಯಕ್ಷರಾಗಿದ್ದ ಕವಿವರ ಬೇಂದ್ರೆಯವರು ತನ್ನ "ಕಿರುಕಂದ "**ಊರ್ಮಿಳಾ**"ವನ್ನು ಹರಸಿ ಪ್ರೋತ್ಸಾಹಿಸಿದುದು - ಇವನ್ನು ರೈಗಳಿಂದೂ ಸ್ಮರಿಸುತ್ತಿರುವರು.

ಮಿತ್ರಮಂಡಳಿಯ ಒಡನಾಡಿಯಾಗಿ ಸುಮಾರು 1935 ರಿಂದ 40ರ ವರೆಗೆ ಸಂಚರಿಸುತ್ತಿದ್ದ ರೈಗಳು, ರಾಷ್ಟ್ರಸೇವಾಕಾರ್ಯದಲ್ಲೂ ಬದ್ಧ ಕಂಕಣರಾದರು, ಮಾತ್ರವಲ್ಲ ನಾಳಿನ ಭವಿಷ್ಯವನ್ನು ಕಾಣಲಿದ್ದ ತರುಣ ಏಳಿಗೆಗೆ ದೀಪದರ್ಶಕರಾಗಿಯೂ ಸಾಗಿದರು.

1938ರ ಸುಮಾರಿಗೆ ಮಂಗಳೂರಲ್ಲಿ ಜರಗಿದ್ದ 'ವಿದ್ಯಾರ್ಥಿ ಸಂಮೇಳನ'ದ ಸೂತ್ರಧಾರರಾಗಿ ಕಾಣಿಸಿದ್ದುದೂ ಮೇಲಿನ ಮಾತಿಗೊಂದು ಸಾಕ್ಷಿಯಾಗಿದೆ. ಸಂಮೇಳನವು ಅಶೋಕ ಮೆಹತಾ, ಕಮಲಾದೇವಿ ಚಟ್ಟೋಪಾಧ್ಯಾಯ, ಯು. ಜಿ. ಭಿಡೆ ಮೊದಲಾದ ರಾಷ್ಟ್ರ ನಿರ್ಮಾಕ ಶಕ್ತಿಗಳ ಸಾಮೀಪ್ಯವನ್ನು ರೈಗಳಿಗೊದಗಿಸಿತು ಮಾತ್ರವಲ್ಲ, ರೈಗಳ ಲೇಖನಿಯಲ್ಲಿ 'ಕ್ರಾಂತಿ ಮಸಿ'ಯನ್ನು ತುಂಬಿಸಿತು. ರೈಗಳು ಕ್ರಾಂತಿಯ ಕಹಳೆಯೂ

ದಿದರು. ಆ ಕ್ರಾಂತಿಯ ಧ್ವನಿ 'ಸ್ವಾತಂತ್ರ್ಯ ಸಂದೇಶ'ದ ಕುರುಹಾಗಿತ್ತು.

ರಾಜಕೀಯ-ಸಾಮಾಜಿಕ-ಸಾಹಿತ್ಯಿಕ-ವಾತಾವರಣದ
ರಸಪಾಕ ರೈಗಳನ್ನು-ರೈಯಾಗಿಸಿತೆನ್ನಬಹುದು.

1944. ನೂತನಾಧ್ಯಾಯದ ಕವಾಟ ತೆರೆಯಿತು. ರೈಗಳ ಜೀವನಮುಖ ಬದಲಾಯಿತು. ಅವರು ಅಧ್ಯಾಪಕ ರಾದರು.

ನಿರಂಜನರೇ ಅನ್ನುವಂತೆ ಅವೃತ್ತಿ ಸರ್ವೋದಾರವಾದುದು. "ಇಂತಹ ವ್ಯಕ್ತಿ ಶಿಕ್ಷಕರಾಗಿ ದೊರೆಯುವುದು ಕಿರಿಯರ ಪುಣ್ಯ" ಎಂದಿದ್ದಾರೆ ಅವರು.

ಪೆರಡಾಲಕ್ಕೆ ಬಂದರು. ರೈಗಳು ನೂತನವಾಗಿ ಆರಂಭವಾದ 'ನವಜೀವನ ಪ್ರೌಢಶಾಲೆ'ಯಲ್ಲಿ ಕನ್ನಡ ಅಧ್ಯಾಪಕರಾದರು; (ಕನ್ನಡ ಪಂಡಿತ) ತನ್ನ ಜೀವನ ತಪಸ್ಸಿಗೆ, ಬಹುಮುಖ ಸೇವೆಗೆ ನೆರವಾಗಬಲ್ಲ 'ಅಧ್ಯಾಪನಯಜ್ಞ'ದಲ್ಲಿ ಯಾಜಮಾನ್ಯವನ್ನು ವಹಿಸಿದುದು, ದಶಕಗಳ ಮುಂದಿನ ಸುಶಾಂತ ಜೀವನವನ್ನು ಪರಿಭಾವಿಸಿಯೇ ಇರಬೇಕು.

ತನ್ನ ಅಧ್ಯಾಪನ ವೃತ್ತಿಯೊಂದಿಗೇನೇ ತಾನೂ ಓದಿ ಬಿ. ಎ; ಎಂ. ಎ; ಪದವಿಗಳನ್ನೂ ಪಡೆದುಕೊಂಡರು.

ಅವರು ಗಳಿಸಿದ ಯೋಗ್ಯತೆಯು, ಇದಕ್ಕೂ ಮಿಗಿಲಾದ ಸ್ಥಾನವನ್ನು ದೊರಕಿಸಿಕೊಡಲು ಅಂದಿಗೇ ಸಮರ್ಥವಾಗಿತ್ತು. ಆದರೆ ಅದನ್ನವರು ಬಯಸಲಿಲ್ಲ. ತಾನಾಗಿ ಒಲಿದು ಬಂದ ಉದ್ಯೋಗ ಲಕ್ಷ್ಮಿಯನ್ನು ಹಿಂದಿರುಗಿಸಿ ಕೇವಲ 'ಕನ್ನಡಪಂಡಿತ' ನಾಗಿರಲು ಬಯಸಿದರು; ಏಕೆಂದರೆ ತನ್ನನ್ನು ರೂಪಿಸಿದ ನಾಡಿನ ಸೇವೆಯ ಬಯಕೆ ಅವರಿಗೆ ಹಿರಿದಾಗಿತ್ತು.

ತನ್ನ ಬದುಕಿಗೆ ಕಲಶವನ್ನೇರಿಸಬಹುದಾಗಿದ್ದ ಮಂಗಳೂರನ್ನು ತೊರೆದು, ಪೆರಡಾಲದಂತಹ ತೀರಾ ಹಿಂದುಳಿದಿದ್ದ ಪ್ರದೇಶವನ್ನವರು ಮೆಚ್ಚಬೇಕಾದರೆ? ಜನಿಸಿದ ನಾಡಿನ ಋಣ ಅವರಿಗೆ ಮಿಗಿಲಾಗಿತ್ತು.

ಅಧ್ಯಾಪಕ ವೃತ್ತಿಗೆ ರಜತೋತ್ಸವವನ್ನು ಕೊಂಡಾಡಿ, ಇಂದಿಗೂ ಅಧ್ಯಾಪಕರೇ ಆಗಿರುವ ರೈಗಳು 56ರ ಕೋಣೆಯನ್ನು ದಾಟುತ್ತಿರುವರಾದರೂ, ತರುಣರನ್ನೂ ನಾಚಿಸುವ ಚಟುವಟಿಕೆ ಅವರದಾಗಿದೆ. ಅವರ ಬರೆಹ-ಪ್ರವಚನಗಳು ಉತ್ಸಾಹದ ಚಿಲುಮೆಗಳಾಗಿವೆ; ನೇಗಿಲ ಹಿಡಿತದಿಂದ ಬಲಿತ ಕೈ ಬೆರಳುಗಳೂ ಧೃಢವಾಗಿವೆ.

ಅಧ್ಯಾಪನ ಯಜ್ಞದಲ್ಲಿ ದೀಕ್ಷಿತರಾಗಿ, ಅವರು ಸಲ್ಲಿಸಿದ ಸುಗಂಧ ವಾತಾವರಣ ಪೆರಡಾಲದಲ್ಲಿ ಮಾತ್ರವಲ್ಲ, ಅವರ ಶಿಷ್ಯ ಸಹಸ್ರರು ನೆಲೆಸಿರುವ ನಮ್ಮ ನಾಡಿನ ಹಲವೆಡೆ ಹರಡಿ ನಿಂತಿದೆ.

ಈ ಸತ್ಸೇವೆಗೆ ಕಲಶವಿರಿಸುವಂತೆ ಕೇರಳದ ಈ ಪ್ರದೇಶದಲ್ಲಿ ಕನ್ನಡ-ಅಧ್ಯಾಪಕನಾಗಿ ದುಡಿಯುತ್ತಿರುವ 'ಕಯ್ಯಾರ ಕಿಞ್ಞಣ್ಣ ರೈ' 'ರಾಷ್ಟ್ರಪ್ರಶಸ್ತಿ'ಯನ್ನು ಗಳಿಸಿದರು.

1969ರ ಸಂಪತ್ ವರ್ಷ ಅವರಿಗೀ ಯೋಗವನ್ನು ಕಲ್ಪಿಸಿತು. "ಇದು ನನ್ನದಲ್ಲ. ನನ್ನನ್ನು ಪ್ರೀತಿಸಿದ ವಿಧೇಯ ವಿದ್ಯಾರ್ಥಿಗಳ ಸನ್ಮನಸ್ಸಿನ ಫಲ! ನಾಡಿನ ಜನತೆ ನನ್ನಲ್ಲಿರಿಸಿದ ಪ್ರೀತಿ ವಿಶ್ವಾಸಗಳ ಸೌಭಾಗ್ಯ ಫಲ" ಎಂದಾಡಿದ ರೈಗಳ ಮಾತು ಸರ್ವಮಾನ್ಯವಾಗುವಂತೆ, ಉಭಯ ರಾಜ್ಯಗಳ ಸಂಘ ಸಂಸ್ಥೆಗಳು, ವಿದ್ಯಾಪೀಠಗಳು, ಶ್ರೀಮಠಗಳು ಅವರನ್ನು ಗೌರವಿಸಿದುವು; ನುಡಿಯೊಡತಿ ಅವರನ್ನು ಉತ್ತರಿಸಿದಳು.

* * * *

ರೈಗಳು ಅಧ್ಯಾಪಕರಾಗಿರುವಂತೆ, ಇಂದು ತನ್ನೂರಿನ ಪಂಚಾಯ್ತಿಯ ಅಧ್ಯಕ್ಷರಾಗಿದ್ದಾರೆ. ಒಂದಿಗೇನೇ ತನ್ನ ಮನೆತನವನ್ನು ಬಳಿವಿಡಿದು ಬಂದ 'ನೇಗಿಲ'ನ್ನು ಪೂಜಿಸುತ್ತಿದ್ದಾರೆ. ಯಾವುದನ್ನುಳಿದರೂ ಮಣ್ಣನ್ನು ಬಿಟ್ಟಿರದ ನೇಗಿಲಯೋಗಿಯವರು.

ಹಸನ್ಮುಖರಾಗಿ ಅವರಾಡಿದ ಮಾತು ಈಗಲೂ ಕಿವಿಗಳಲ್ಲಿ ಧ್ವನಿಸುತ್ತಿದೆ.

"ಈಗಲೂ ನಾನು ಕೃಷಿಕ. ಅದು ನನ್ನ ಜೀವನ. ಹಿರಿಯರಿಂದ ಬಂದ ಗುಣ. ನಾನು ಮಣ್ಣಿನ ಮಗ. ಹಿಡಿಮಣ್ಣ ಸ್ವರ್ಣ ಪರ್ವತವಾಗಿಸಿ ದುಡಿವ ಆಸಕ್ತಿ ನನಗೆ. ನೊಗ-ನೇಗಿಲನ್ನು ಮಂದಾರ ಮಾಲೆಯೆನೆ ಧರಿಸುವ ಶ್ರದ್ಧೆ ನನಗಿದೆ. ಲೇಖನಿಯಂತೆ ನನ್ನ ನೇಗಿಲ ಹಿಡಿತ. "ಕೆಸರಿನಿಂದಮೃತಕಲಶವನೆತ್ತಿ ತೋರುವ ಸಾಹಸ-ನನ್ನದು!"-ತನಗಾಗಿ ಕಾದು ನಿಂತಂತಿರುವ ಗೈಮೆಯ ನೆಲವನ್ನು ನನಗೆ ತೋರುತ್ತ ಈ ಮಾತನ್ನಾಡಿದ್ದರವರು.

* * * *

ದಶಕಗಳಾಚೆಯಿಂದ ನನ್ನನ್ನು ಹಿಂದಿರುಗಿಸಿದ ರೈಗಳು, ಮನೆಯ ಮುಂದಿನ ತೋಟವನ್ನು ತೋರಿದರು. ಕೃತಾರ್ಥ ಕೃಷಿಕನ ತೃಪ್ತಿ ಅವರ ಮುಖದಲ್ಲಿತ್ತು. ಅಡಿಕೆ, ತೆಂಗು, ಭತ್ತ, ಕಬ್ಬು ಮೊದಲಾದುವನ್ನು ಯಾಂತ್ರಿಕ ನೇಗಿಲುಗಳ ನೆರವಿನಿಂದ, ಸುಧಾರಿತ ಸಂಪ್ರದಾಯದಿಂದ ಬೆಳೆಸುವ ಮರ್ಮವನ್ನವರು ಹೊರಗೆಡಹಿದರು.

ಮಾತಿಗೊಂದು ಅಲ್ಪ ವಿರಾಮವನ್ನು ಕೊಡುವಂತೆ ರೈಗಳು ನನಗವರ ಗಳಿಕೆಗಳನ್ನು ತೋರಿದರು. ಒಳ್ಳೊಳ್ಳೆಯ ಗ್ರಂಥ

ಗಳನ್ನವರು ಕಲೆ ಹಾಕಿದ್ದಾರೆ. ಪ್ರಾಚೀನ ಕಾವ್ಯಗಳು, ತತ್ವ ಗ್ರಂಥಗಳು, ಉಪನಿಷತ್ತುಗಳು....ಎಲ್ಲ ಅಲ್ಲಿವೆ. ಇನ್ನೊಂದು ಮನೆಯಲ್ಲಿ ಇನ್ನೆರಡು ಭಂಡಾರಗಳಿವೆಯೆಂದ ರೈಗಳು ನನ್ನ ಬೆರಗಿನ ತಂತಿಯನ್ನು ಮೆಲುವಾಗಿ ಮಿಡಿದರು.

"ನನಗೆ ಬೇಕಾದ ಪುಸ್ತಕಗಳು ನನ್ನವೇ ಆಗಿದ್ದರೆ, ಚಿಂತನೆಗೆ ಅನುಸಂಧಾನಕ್ಕೆ ಒಳಿತಲ್ಲವೆ?" ಎಂದರು.

"ಓದಬೇಕು; ಮಥಿಸಬೇಕು. ಅನುಭವ ಮಂಟಪ ಸುಭದ್ರವಾಗಬೇಕು. ಬರೆಹಗಳು ಶ್ರೀಮಂತವಾಗಬೇಕಾದರೆ, ಬರೆಹಗಾರನ ಓದು ಅವ್ಯಾಹತವಾಗಿ ನಡೆಯಬೇಕು. ಅದೂ ಒಂದು ದೀಕ್ಷೆ" ಎಂದನ್ನುತ್ತ ಹೊರಬಂದೆನು.

ನಿಮಿಷಗಳು ದಾಟಿದುವು. ರೈಗಳೊದಗಿಸಿದ ಅನುಭವದ ಹೊರೆ ಹೊತ್ತು, ಹಿಂದೆರಳಲು ಎದ್ದೆನು. ಒಲವಿನಿಂದವರು ನನ್ನನ್ನು ಬೀಳ್ಕೊಟ್ಟರು, ಇನ್ನೊಮ್ಮೆ ಬರುವಂತೆ ಕರೆ.

"ನಿಮ್ಮೆಲ್ಲ ಮಿತ್ರರ ಇಂತಹ ಅಕೃತ್ರಿಮ ಸ್ನೇಹಕ್ಕೆ ನಾನೇನು ಪ್ರತಿಯಾಗಿ ಕೊಡಬಲ್ಲೆ?"....ನಾನು ಮುಗುಳ್ನಕ್ಕೆ "ಈ ವಿಶ್ವಾಸ ಸಾಕಷ್ಟಾಯಿತು" ಎಂದು ವಂದಿಸಿದೆ.

*　　*　　*　　*

## ಭಾಗ ೨

"ಕಾಸರಗೋಡಿನ-ರೈ" ಎಂದು ಹಿರಿಯರಾದ ಹ. ಮಾ. ನಾಯಕರು ರೈಗಳ ಬಗ್ಗೆ ಒಳ್ಳೆಯ ಆಶಯ ನೀಡಿ, ಕಾಸರಗೋಡಿನ ಗೌರವವನ್ನು ಎತ್ತಿ ತೋರಿದ್ದಾರೆ.

*　　*　　*　　*

ರೈಗಳು–"ಅವರೊಬ್ಬ ಉತ್ತಮ ಸಮಾಜ ಸಂಘಟಕರು."

1935ರಿಂದ 47ರ ಕಾಲ. ಈ ಕಾಲ ರೈಗಳನ್ನು ಕ್ರಾಂತಿಯ ಕಹಳೆಯೂದಲು ಕರೆಗೊಟ್ಟಿತು. ದೇಶಕ್ಕೆ ಸ್ವಾತಂತ್ರ್ಯ ಸಿಗುವ ವರೆಗೆ ಕಾಂಗ್ರೆಸ್ ಪಕ್ಷದ ಸದಸ್ಯರಾಗಿ ದುಡಿದ ರೈಗಳು, 1940ರ ವೈಯಕ್ತಿಕ ಸತ್ಯಾಗ್ರಹದಲ್ಲಿ, ಗಾಂಧೀಜಿಯವರಿಂದಲೆ ಸತ್ಯಾಗ್ರಹಿಯಾಗಿ ಆರಿಸಲ್ಪಟ್ಟು ನೆರೆ ಹಾವಳಿಯ ಪರಿಹಾರ ಕಾರ್ಯದಲ್ಲಿ, ಅಹರ್ನಿಶಿ ನೆರವಾದರು; ದೀನ ದಲಿತರ ಆಕ್ರೋಶವನ್ನು ನೇರಾಗಿ ಕೇಳಿ 'ಮಾನವ'ನಾಗಿ- ಅವರೊಡನಾಡಿಯಾಗಿ ನಿಂತರು. ಆ ದಿನಗಳನ್ನೀದೂ ರೈಗಳು ಮರೆಯರು.

ಅವರು ದೇಶಭಕ್ತಿಯ ಗೀತೆಗಳನ್ನು ಹಾಡಿದರು. 'ರಕ್ತ ಮನಿ' 'ಅಗಸ್ಟ್‌ಕ್ರಾಂತಿ'ು ಕಹಳೆ'ಗಳ ಮೂಲಕ ಜನಶಕ್ತಿಯನ್ನು ಬಲಿಯಿಸಿದರು

ಅಧ್ಯಾಪಕ ಜೀವನಕ್ಕೆ ನಾಂದಿ ಹಾಡಿದಂದಿನಿಂದ, ವಿವಿಧ ಮುಖ ದರ್ಶನವು, ಜೀವನ ಪಾಠವು ಮಾನವೀಯತೆ'ಯನ್ನು ಆವರ್ತಿಸತೊಡಗಿತು; ಅಗಸ್ಟ್ ಕ್ರಾಂತಿಯು 'ನವಚೇತ'ನವನ್ನು ಧಾರೆಯೆರೆದಿತ್ತು ಅವರ ಪ್ರಬುದ್ಧ ಜೀವನದಲ್ಲಿ! ಆದುದರಿಂದಲೆ ಅವರು ನಿಷ್ಠಾವಂತ ಸಮಾಜಕಾರ್ಯಕರ್ತರಾದರು; ದುಡಿಮೆಯ ವೈವಿಧ್ಯವನ್ನವರು ತೋರಿದರು; ಹಲವಂಶದಲ್ಲದನ್ನು ಕಾರ್ಯಗತವಾಗಿಸಿದರು.

1947ರಲ್ಲಿ ಕಾಸರಗೋಡಿನ 'ಮುದ್ದಣನಗರ'ದಲ್ಲಿ ಜರಗಿದ ಸಾಹಿತ್ಯ ಸಂಮೇಲನದ ಅಂಗವಾಗಿ ಏರ್ಪಡಿಸಲಾಗಿದ್ದ 'ಏಕೀಕರಣ ಸಂಮೇಳನ'ದಲ್ಲಿ ಭಾಗವಹಿಸಿದ ರೈಗಳು ತನ್ನ ವೈಯುಕ್ತಿಕ ಪ್ರಭಾವದ ಮುಂದೆ ಸಂಮಿಳಿತರನ್ನಾಕರ್ಷಿಸಿದ್ದರು. ಮುಂದೆ ಸರ್ವಮಾನ್ಯರಾದ ಕೆ. ಆರ್. ಕಾರಂತ, ಜಿನರಾಜ

ಹೆಗ್ಡೆ ಮೊದಲಾದ ಕಾರ್ಯಕರ್ತರ ಜತೆಯಲ್ಲಿ ಏಕೀಕರಣ ಕಾರ್ಯಕ್ಕಾಗಿ ಯತ್ನಿಸಿದ್ದರು.

ಭಾಷಾ-ತಳಹದಿಯಲ್ಲಿ 'ಪ್ರಾಂತೀಕರಣ'ವಾದಾಗ ಕಾಸರಗೋಡಿಗಾದ ಅನ್ಯಾಯವನ್ನು ಇದಿರಿಸಿ ನ್ಯಾಯವನ್ನು ಪಡೆಯಲು ರೂಪುದಾಳಿದ 'ಕಾಸರಗೋಡು ಕರ್ಣಾಟಕ ಪ್ರಾಂತೀಕರಣ ಸಮಿತಿ'ಯಲ್ಲಿ ಸೇರಿ 15 ವರ್ಷಗಳ ಕಾಲ ನಿರಂತರ ಹೋರಾಟ ನಡೆಸಿದ್ದಾರೆ; ಇಂದೂ ಕೂಡ ಅದೇ ಸಮಿತಿಯ ಕಾರ್ಯದರ್ಶಿಗಳಾಗಿದ್ದು ಕಾಸರಗೋಡಿನ 'ಕನ್ನಡತನ'ಕ್ಕಾಗಿ ದುಡಿಯುತ್ತಾರೆ.

ತಾನು ಜನಿಸಿದ, ತನ್ನನ್ನು ಹರಸಿದ ನಾಡು ಅನ್ಯಾಯವಾಗಿ ಕೇರಳದ ಮುಷ್ಟಿಯಲ್ಲಿ ಬೀಳುವಂತಾದ ನೋವನ್ನು ಸಹಿಸದ ರೈಗಳು ತಾನು ಹೋದೆಡೆಯಲ್ಲಿ, ತನ್ನನ್ನು ಜನ ಆದರಿಸಿದಲ್ಲಿ, ಕಾಸರಗೋಡಿನ ಹೆಸರನ್ನೆತ್ತಿದಲ್ಲಿ-ಕಣ್ಣೀರಿಳಿಸಿ ತನ್ನ ನೋವನ್ನು ತೋಡಿದ್ದಾರೆ....

ಎದೆಯುಳಲನ್ನು ತುಂಬಿಟ್ಟ ಈ ಕವನ,

ಬೆಂಕಿ ಬಿದ್ದಿದೆ ಮನೆಗೆ ಓ....ಬೇಗ ಬನ್ನಿ<br>
ಎಲ್ಲರೂ ಎದ್ದೆದ್ದು ಓಡಿ ಬನ್ನಿ-<br>
ಕನ್ನಡದ ಗಡಿಕಾಯೆ<br>
ಗುಡಿಕಾಯೆ-ನುಡಿಕಾಯೆ<br>
ಕಾಯಲಾರೆವೆ-ಸಾಯೆ<br>
ಓ ಬನ್ನಿ ಬನ್ನಿ<br>
(ಬೆಂಕಿ ಬಿದ್ದಿದೆ ಮನೆಗೆ)<br>
ಹಾರೆಗುದ್ದಲಿ ಕೊಡಲಿ ನೊಗನೇಗಿಲೆತ್ತುತಲಿ<br>
ನೆಲದಿಂದ ಹೊಲದಿಂದ ಹೊರಟು ಬನ್ನಿ-

ಕನ್ನಡ ನಾಡಿಂದ
ಕಾಡಿಂದ ಗೂಡಿಂದ
ಕಡಲಿಂದ-ಸಿಡಿಲಿಂದ-ಗುಡುಗಿ ಬನ್ನಿ
ಬೆಂಕಿ ಬಿದ್ದಿದೆ ಮನೆಗೆ.......
ಏಳ್ಗೆ ಕರ್ಣಾಟಕ-ಬಾಳ್ಗೆ 'ಕರ್ಣಾಟಕಂ-ಆಳ್ಗೆ
ಕರ್ಣಾಟಕ

ಹಾಡಲ್ಲದ ಪಾಡಾದ, ನುಡಿಯಲ್ಲದ ಗುಡುಗಾದ, ಕ
ವಲ್ಲದ ಮನನವ

ಈ ಎದೆಯಳಲ ಉರಿಯನ್ನು ಅವರೇ ಹೊರಚೆಲ್ಲಬೇಕ

1956ರ ಧಾರವಾಡದ ಸಂಮೇಳನದಲ್ಲಿ ಈ ಗೀತವನ
ರೈಗಳು ಹಾಡುತ್ತಿದ್ದಂತೆ 'ಕಟ್ಟೀಮನಿ' ಅವರು ಧಿಗ್ಗನೆ ಎದ್ದು

"ರೈಗಳೆ..........

.......ನಾವು ಬರುತ್ತೇವೆ ಕಾಸರಗೋಡಿಗೆ"

ಎಂದು ಆವೇಶದಿಂದ ನುಡಿದಾಗ ಕಣ್ಣು-ಕಿವಿಗಳನ
ಎಚ್ಚರಿಸಿ ಕುಳಿತಿದ್ದ ಸಭಾ ಭವನವೆ ಕೋಲಾಹಲಿಸಿತಂತೆ!
ಗೀತಗಳಲ್ಲಿ ಆ ಬಗೆಯ ಕಸುವಿದೆ! ಓದಿನಲ್ಲಿ ಸೆಳೆತವಿತ್ತು.

*            *            *            *

**ನಾಡಿನ ಮೇಲ್ಮೆಯಲ್ಲಿ:**

ಬದಿಯಡ್ಕ ಪಂಚಾಯ್ತಿಯ ಅಧ್ಯಕ್ಷರಾಗಿ, ರೈಗಳ
1963ರಲ್ಲಿ ಅವಿರೋಧವಾಗಿ ಆಯ್ಕೆಗೊಂಡರು ಅದವ
'ವ್ಯಕ್ತಿತ್ವ'ದ ಪ್ರಭಾವ. ಇಲ್ಲಿನ ಜನತೆಗೆ "ರೈ-ಕಾಸರಗೋಡಿನ
ರೈ" ಎಂದು ಚೆನ್ನಾಗಿ ಗೊತ್ತು.

1964ರಲ್ಲಿ "ಆದರ್ಶಪಂಚಾಯ್ತಿ" ಎಂದು ಬಹುಮಾ
ವನ್ನು ಗಳಿಸಿದ ಈ ಪಂಚಾಯ್ತಿ, ಅನೇಕ ಸೌಲಭ್ಯಗಳನ

ಹೆಚ್ಚಿಸಿಕೊಂಡಿತಲ್ಲದೆ, "ವಿದ್ಯಾಗಿರಿ–ಉದಯಗಿರಿ"ಗಳಲ್ಲಿ ಎರಡು ಶಾಲೆಗಳನ್ನು ತೆರೆದು, ವಿದ್ಯೆಯ ಗಂಧ ಗಾಳಿಯೆ ಸೋಂಕದ ಈ ಪ್ರದೇಶಗಳಲ್ಲಿ ಜೀವನವನ್ನು ತುಂಬಿತು.

ಉದಾರಿಗಳಾದ ರೈಗಳು 'ರಾಷ್ಟ್ರ ಪ್ರಶಸ್ತಿ'ಯಲ್ಲಿ ತನಗೆ ದೊರಕಿದ ಬಹುಮಾನವನ್ನು 'ವಿದ್ಯಾಗಿರಿ'ಯಲ್ಲಿನ ತನ್ನ ಕಲ್ಪ ವೃಕ್ಷಕ್ಕೆ ಧಾರೆಯೆರೆದರು.

ಪಂಚಾಯ್ತಿಯ ಸಾರ್ವಮುಖೀನವಾದ ಉನ್ನತಿಯನ್ನು ಹಾರೈಸಿದ ರೈ ನೀರಿಗಾಗಿ ಒದ್ದಾಡುವ ಜನತೆಯ ಕಷ್ಟವನ್ನು ಮನಗಂಡು, ಈ ಚಿಕ್ಕ ಪೇಟೆಯಲ್ಲಿ ಕುಡಿಯುವ ನೀರಿಗಾಗಿ ನಳ್ಳಿಯೋಜನೆ ಮಾಡಿಸಿದರು; ಅಲ್ಲಲ್ಲಿ ಬಾವಿಗಳನ್ನು ತೋಡಿಸಿ ದರು; ಕೃಷಿಗಾಗಿ ಅಣೆಕಟ್ಟುಗಳನ್ನು ಸಮೆಯಿಸಿದರು.

ಇದರೊಂದಿಗೇನೆ, ಜನತೆಯಲ್ಲಿ ಸಾಂಸ್ಕೃತಿಕ ಮನೋ ಭಾವವು ಚಿಗುರೇರುವಂತೆ, ಪಂಚಾಯ್ತಿ ವಾರ್ಷಿಕೋತ್ಸವಗಳಲ್ಲಿ ನಾಟಕಾದಿಗಳನ್ನು, ಕವಿಗೋಷ್ಠಿಗಳನ್ನು, ನಾಡು–ನುಡಿಗಳಿಗಾಗಿ ದುಡಿದ ಮಹನೀಯರ ಗೌರವಾರ್ಥ ಸತ್ಕಾರಸಾಮಾರಂಭಗ ಳನ್ನು ಏರ್ಪಡಿಸಿದ್ದರಲ್ಲದೆ, ಯುವಜನಾಂಗದ ದೈಹಿಕೋನ್ನತಿ ಗಾಗಿ ವಿವಿಧ ಸ್ಪರ್ಧೆಗಳನ್ನೂ ಯೋಚಿಸಿದ್ದಾರೆ.

'ಮಂಜೇಶ್ವರ ಬ್ಲಾಕ್ ಡೆವಲಪ್‌ಮೆಂಟ್; ಕಮಿಟಿ'ಯ ಚೇರ್‌ಮ್ಯನ್ ಆಗಿ 1968ರಲ್ಲಿ ಆಯ್ಕೆಗೊಂಡ ರೈಗಳು ಕೇಂದ್ರ ಸಹಾಯಿತ ಯೋಜನೆಗಳು ಈ ಕ್ಷೇತ್ರಕ್ಕೆ ಹೊಂದಿಬರುವಂತೆ ಮಾಡಿದರಲ್ಲದೆ, 'ಕ್ಷೇತ್ರಾಭಿವೃದ್ಧಿ ಖಾತೆ'ಯ ಮೂಲಕ ಜಾರಿ ಯಾಗುವ ಯೋಜನೆಗಳು ಎಲ್ಲ ಪಂಚಾಯ್ತಿಗಳಿಗೂ ಸಮಾನ ವಾಗಿ ಹಂಚಿ ಬರುವಂತೆ ಹೋರಾಟವೆಸಗಿ ಯಶಸ್ವಿಗಳಾದರು.

"ಎಮ್ಮೊಂದಿರಗ ಬಾಳ ಸಾವುನೋವಿನ ಗೋಳ
ನುಂಗಿಹೆವು ಸಮಪಾಲ-ನಮಗದುವೆ ಮೋಕ್ಷಂ"

ಎಂದು ಮುನ್ನಡೆವ ರೈಗಳ ನಿಷ್ಕಲ್ಮಷ ವೃತ್ತಿಗೆ-ಎದೆಗಾರಿಕೆಗೆ ಬೇರೆ ಉದಾಹರಣೆಗಳು ಬೇಕಿಲ್ಲ.

* * * *

ಕಾಸರಗೋಡು ಶೈಕ್ಷಣಿಕ ಜಿಲ್ಲಾ ಸೆಕೆಂಡರಿ ಶಾಲಾ ಅಧ್ಯಾಪಕ ಸಂಘದ ಅವಿರೋಧ ಅಧ್ಯಕ್ಷರಾಗಿ, ಅಧ್ಯಾಪಕರ ಪಾಲಿಗೆ ಬಂದ ಸಮಸ್ಯೆಗಳ-ಇಕ್ಕಟ್ಟಿನ ಪರಿಹಾರ ಕಾರ್ಯದಲ್ಲೂ ರೈಗಳ ಹೆಜ್ಜೆ ಮುಂದಿತ್ತು.

ಓದಿಗೆ ಅನುಕೂಲವಾಗುವಂತೆ, ಬದಿಯಡ್ಕ ಬೇಳಗಳಲ್ಲಿ ಪುಸ್ತಕ ಭಂಡಾರಗಳನ್ನು ಸ್ಥಾಪಿಸಿದರಲ್ಲದೆ, ಕಣ್ಣಾನೂರು ಜಿಲ್ಲಾ, ಲೋಕಲ್ ಲೈಬ್ರರಿ ಅಥಾರಿಟಿಗೆ, ಈ ತಾಲೂಕಿನಿಂದ ಅಧಿಕೃತ ಪಂಚಾಯ್ತಿ ಪ್ರತಿನಿಧಿಯಾಗಿ ಎರಡು ಬಾರಿ ಆಯ್ಕೆಗೊಂಡ ಕಯ್ಯಾರರು 'ವರ್ಕಾಡಿ-ಪೆರಡಾಲಗಳಲ್ಲಿ ನೂತನ ಪುಸ್ತಕ ಭಂಡಾರಗಳು, ವಾಚನಾಲಯಗಳು ಮುಖ ತೋರುವಂತೆ ಮಾಡಿದರು.

ಹರಿಜನ ಸೇವಾಕಾರ್ಯದಲ್ಲೂ ಅವರು ಹಿಂದಿರಲಿಲ್ಲ. 1962ರಿಂದ 66ರ ವರೆಗೆ ಹರಿಜನೋದ್ಧಾರ ಕಾರ್ಯದಲ್ಲಿ ಆಸಕ್ತರಿದ್ದು, ತೀರ ಹಿಂದುಳಿದಿರುವ "ಕೊರಗ"-"ಗಿರಿಜನ" ವರ್ಗದ ವಿದ್ಯಾರ್ಥಿಗಳಿಗಾಗಿ ಒಂದು 'ರೆಸಿಡೆನ್‌ಶಿಯಲ್' ಶಾಲೆಯನ್ನು ಪ್ರಾರಂಭಿಸಿದರಲ್ಲದೆ, 1971ರ ಶುಭವರ್ಷದಲ್ಲಿ "ಬಾಲವಾಡಿ" ಯೊಂದನ್ನು ಈ ಪ್ರದೇಶದಲ್ಲಿ ತೆರೆದಿರುವುದು ಅವರ ಸಂಸ್ತುತ್ಯ ಸೇವೆಗೊಂದು ನಿದರ್ಶನ.

'ನಾಡು—ನುಡಿ'ಗಳಿಗಾಗಿ ತನ್ನಿಂದಾಗಬೇಕಾದ ಬಹು

ಸೇವೆಗಾಗಿ, ತನ್ನ ಬೌದ್ಧಿಕ-ನೈತಿಕ ಸಂಪತ್ತನ್ನು ಮೀಸಲಿರಿಸಿದ ರೈಗಳು ಭವಿಷ್ಯದ ರಸನಿಮಿಷಗಳಿಗಾಗಿ ಕಾಯುತ್ತಿದ್ದಾರೆ.

"ನಾಡು ನುಡಿಗಳಿವೆರಡು ಎನ್ನೆದೆಯನರಳಿಸಿವೆ" ಎಂಬ ನಾಮಸ್ಮರಣೆಯೊಂದಿಗೆ ಸುಪ್ರಭಾತವನ್ನು ಕಂಡು 'ಹತ್ತಿರದ ಕುದುರೆಮುಖ--ದೂರದ ಹಿಮಾಲಯವು" ಎಂಬ ಸಂಕಲ್ಪದಲ್ಲಿ ಜೀವನವನ್ನೂ-ಸಾಹಿತ್ಯವನ್ನೂ ಎತ್ತರೆತ್ತರಕ್ಕೆ ಒಯ್ಯುವ ತಪಸ್ಸಿನಲ್ಲಿ ಅವರು ಸಶ್ರದ್ಧರಿದ್ದಾರೆ.

## ಭಾಗ ೩

### ಸಮರ್ಥ ಅಧ್ಯಾಪಕ....

1944ರಿಂದ ತನ್ನನ್ನು ಅಧ್ಯಾಪಕ ವೃತ್ತಿಗೆ ಮುನ್ನೊಂಕಿದ ರೈಗಳವರ ಅಧ್ಯಾಪನ ಕೌಶಲ್ಯವನ್ನು ಅವರಿಂದ ಅನುಗ್ರಹ ಪಡೆದ ವಿದ್ಯಾರ್ಥಿಗಳ ಅನುಭವದಿಂದ ಕಂಡರಿಯಬೇಕು. 1948, 1965, 1971ರಲ್ಲಿ "ಅಧ್ಯಾಪಕ ಪ್ರಶಿಕ್ಷಣ - ತರಬೇತಿ ಕಾಲ" ಗಳಲ್ಲಿ ನಾನವರ, ಜತೆಗಾರನಿರುತ್ತ "ಅಧ್ಯಾಪಕ ನಿಷ್ಠ ಗುಣಗಳನ್ನು "ಚೆನ್ನಾಗಿ ಮನವರಿಕೆ ಮಾಡಿಕೊಂಡಿದ್ದೇನೆ. ಅವರ ಮಾದರಿ ಪಾಠಗಳನ್ನು ಕೇಳಿದ್ದೇನೆ. ಅವರ ಮಾದರಿ ಪಾಠವೆಂದರೆ, ಸಾರಸ್ವತ ಸಂಪತ್ತಿನೊಂದಿಗೆ ಅವರ ನಲಿದಾಟ. ವಿದ್ಯಾರ್ಥಿಗಳನ್ನು ತನ್ನೆಡೆಗೆ ಆಕರ್ಷಿಸಿ, ಪಠ್ಯ ಪಠನ ಪಾಠನದೊಂದಿಗೆ "ಸಮರಸರನ್ನಾಗಿಸಿ ಉನ್ಮೇಶ ಶೀಲರನ್ನಾಗಿಸುವ ಕುಶಲ ವೃತ್ತಿಯನ್ನು ರೈಗಳವರು ಮೈಗೂಡಿಸಿಕೊಂಡಿದ್ದಾರೆ.

ಕಯ್ಯಾರರು ಶಿಕ್ಷಣ ಕ್ಷೇತ್ರದಲ್ಲಿ ವ್ಯಕ್ತಿಯಲ್ಲ; ಒಂದು ಶಕ್ತಿ; ಶಕ್ತಿ ಮಾತ್ರವಲ್ಲ ಒಂದು ಶಿಲ್ಪ. ಆದುದರಿಂದಲೆ ಅವರು

ಭಾವೀ ತರುಣರಲ್ಲಿ ಕ್ರಿಯಾಶಕ್ತಿಯನ್ನು ತುಂಬಿಟ್ಟು ಜೀವನದ ರೇಖೆಗಳನ್ನು ಮೂಡಿಸುವ ಕುಂಚಗಾರ.

ಅವರ ಅಧ್ಯಾಪನದ ಸೆಲೆಯನ್ನಷ್ಟು, ಗಳಿಸಿದ ಅನುಭವದ ಹಿನ್ನೆಲೆಯಲ್ಲಿ ಸಿಲುಕಿದರೆ:—

ದೀರ್ಘಕಾಯದ, ಸಮುನ್ನತವಾದ ನಿಲುವಿನ, ಗಂಭೀರ ವಾಣಿಯ ರೈಗಳು, ಶುಭ್ರ, ಖಾದಿ-ವಸ್ತ್ರಧಾರಿಗಳಾಗಿ, ಭಾರವಾದ ಹೆಜ್ಜೆಯನ್ನಿರಿಸಿ ಪಾಠ ಹೇಳುವುದಕ್ಕಾಗಿ ಬರುವುದೆಂದರೆ, ತರಗತಿಯಲ್ಲಿ ಕುಳಿತಿರುವ ವಿದ್ಯಾರ್ಥಿಗದು, "ಶ್ರವಣ-ಮನನ" ಗಳ ಪೂರ್ವಭಾವಿಯಾಗಿ ದೊರಕತಕ್ಕ 'ದರ್ಶನ'ದ ಸವಿಯೂಟ.

ಅಧ್ಯಾಪಕರು ತರಗತಿಗೆ ಬರುವುದೇ ತಡ. ಸಾಮಿಪ್ಯದಿಂದ ಅಭಿಮಾನವನ್ನು ಗಳಿಸಿದ ವಿದ್ಯಾರ್ಥಿಗಳು, ಮುಂದಿನ ನಿಮಿಷಗಳಲ್ಲಿ ತಮ್ಮ ಪಾಲಿಗೆ ದೊರಕಲಿರುವ ಅನುಭವದ ರಸ ವಿರ್ಯಷಾಸ್ವಾದನೆಗಾಗಿ ಬದ್ಧಶ್ರದ್ಧರಾಗುವರು.

ಕನ್ನಡ-ತುಳುನಾಡುಗಳ-ನೆಲದ ನೀರುಂಡ, ಈ ಮಣ್ಣಿನ ಹಿರಿಮೆಯನ್ನರಿತು ಹಾಡಿದ ಕವಿಗಳೊಬ್ಬರು, ಕನ್ನಡದ ಅಧ್ಯಾಪಕರಾಗಿ ವಿದ್ಯಾರ್ಥಿಗಳ ಮುಂದಿರುವುದು ಸುಲಭವಲ್ಲ. ಈ ಅಧ್ಯಾಪಕರು ಕವಿಗಳಿರುವುದರಿಂದಲೆ, ತಾನೆತ್ತಿಕೊಂಡ ವಿಷಯವದು ಗದ್ಯವಿರಲಿ - ಪದ್ಯವಿರಲಿ. ತನ್ನ ಸಮುನ್ನತ ವಾಣಿಯಿಂದ ಅದನ್ನು ವಿವರಿಸಿ, ತಾನು ಸುತ್ತಾಡುತ್ತಿರುವ ಭಾವನಾ ಲೋಕದಲ್ಲಿ ವಿದ್ಯಾರ್ಥಿಗಳನ್ನೂ ಒಯ್ದು ಸುತ್ತಾಡಿಸಬಲ್ಲರು; ಒಂದಿಗೇನೇ ತನ್ನನ್ನು ಒಲವಿನಿಂದ ಕಂಡು ನಂಬಿ ನಡೆವ ವಿದ್ಯಾರ್ಥಿಗಳ ಅಭಿರುಚಿಯನ್ನು ಗುರುತಿಸಿ, ಅದಕ್ಕನುಗುಣವಾಗಿ ಪ್ರೋತ್ಸಾಹದ ನೀರೆರೆದು, ಅವರಲ್ಲಿರುವ ಅಂತಃಶಕ್ತಿಯನ್ನು ಬಲಿಯಿಸುವರು.

ಅಭಿಮಾನೀ ಅಧ್ಯಾಪಕರಿವರು ಒಂದೆಡೆ, ನುಡಿಗಳೊತ್ತಡದಿಂದ ವ್ಯ ಮರೆತು ಆಡಿದ ಮಾತುಗಳನ್ನು ಕೇಳಿದ್ದೇನೆ; "ನನ್ನ ವಿದ್ಯಾರ್ಥಿಗಳು ಈ ವರೆಗೆ ನನಗಿದಿರಾಗಿ ನಡೆದ ಸಂದರ್ಭವನ್ನು ಕಂಡಿಲ್ಲ. ನಾನು ಪಾಠ ಹೇಳಿದ ಯಾವನೇ ವಿದ್ಯಾರ್ಥಿ ಈ ವರೆಗೆ ಕನ್ನಡದಲ್ಲಿ ಅನುತ್ತೀರ್ಣನಾಗಲಿಲ್ಲ."

ಅಧ್ಯಾಪಕ ಜೀವನಕ್ಕೆ ರಜತೋತ್ಸವವನ್ನು ಹಾಡಿನಿಂತು, ರಾಷ್ಟ್ರ ಪ್ರಶಸ್ತಿಕೆಯ ಮೂಲಕ ಅದಕ್ಕೆ ಕಲಶವನ್ನೂ ಏರಿಸಿದ ಈ ಕವಿ; ಈ ಪಂಡಿತ, ಈ ನಾಡಿನ ಕ್ರಾಂತಿಯ ಕಿಡಿ, ಈ ಕ್ರಿಯಾಶಾಲೀ ಅಧ್ಯಾಪಕ ಹೀಗೆ ಹೇಳಿದುದರಲ್ಲಿ ಆಶ್ಚರ್ಯವಿಲ್ಲ. ಅವರಾಡಿದ ಈ ಮಾತಿಗೆ ಕಿವಿಗೊಟ್ಟುನಿಲ್ಲುವ ಅವರದೇ ವಿದ್ಯಾರ್ಥಿಗಳು ಹರ್ಷಾರವವನ್ನು ಕಾಣಿಕೆಯಿರಿಸುವುದೇ ಈ ಹೇಳಿಕೆಗಾಗಿರುವ ಸಾಕ್ಷಿ.

## ಅಧ್ಯಾಪನ

ತಾನೆತ್ತಿಕೊಂಡ ಪಾಠ ವಿಷಯಕ್ಕೆ ಯೋಗ್ಯವಾದ ವಾತಾವರಣವನ್ನು, ನಾಲ್ಕು ಗೋಡೆಗಳ ಚೌಕಟ್ಟಿನಲ್ಲಿ ಕಲ್ಪಿಸಿಕೊಂಡು ವಿದ್ಯಾರ್ಥಿಗಳ ಮುಂದೆ ಪ್ರಾಚೀನ ಕವಿಗಳಾದ ರನ್ನ ಪಂಪ ಮೊದಲಾದವರನ್ನು, ನಾರಣಪ್ಪ-ಲಕ್ಷ್ಮೀಶ ಮೊದಲಾದವರನ್ನು ಸಾಂದರ್ಭಿಕ ಸಂನಿವೇಶದಲ್ಲಿ ಕರೆತರುವ ರೀತಿಯಿದು ರೈಗಳದ್ದೇ ಆದ ಅಪೂರ್ವ ಸಂವಿಧಾನ. ನಂದಳಿಕೆಯ ಕೋಗಿಲೆಯಾದ ಮುದ್ದಣ, ಮಂಜೇಶ್ವರದ ಗಂಗೆಯಾದ ಗೋವಿಂದ ಪೈ ಇವರನ್ನು ಕಂಡೊಡನೆ ಬಾಗಿ, ನುಡಿಯೊಡತಿಯ ದಿವ್ಯಾಭರಣಗಳಾಗಿ ಅವರು ಸಮರ್ಪಿಸಿದ ಕೃತಿರತ್ನಗಳನ್ನು ವಿದ್ಯಾರ್ಥಿಗಳ ಮುಂದೆ ಬೆಳಗಿ. ಕು ವೆಂಪು, ಡಿ.ವಿ.ಜಿ, ಬೇಂದ್ರೆ ಮೊದಲಾದವರನ್ನು ಕರೆತಂದು, ಅವರ ಕಾವ್ಯಾಮೃತದ ಸವಿಯನ್ನುಣ್ಣಿಸುವ

ವಿಧಾನವದು ಅನ್ಯಾದೃಶವು.

ತಾನು ವಿದ್ಯಾರ್ಥಿಗಳಿಗೆ ಒದಗಿಸಿದ ಅನುಭವವು ಸದಾ ಹಸುರಾಗಿದ್ದು ಉಲ್ಲಾಸವನ್ನು ತುಂಬಿಸಬೇಕೆಂಬುದು ಈ ಅನು ಭಾವಿಯ ಸಂಕಲ್ಪ ಅಧ್ಯಾಪಕರಿವರಿಗೆ ದಿ। ಗೋವಿಂದ ಪೈಗಳ ನಾಮಶ್ರವಣವೆಂದರೆ ಗೀತಾಶ್ರವಣದಂತೆ ಸಂಪೂಜ್ಯ...

ದಿವಂಗತರು ಬರೆದ ವೈಶಾಖಿ, ಗೊಲ್ಗೊಥಾ, ಹೆಬ್ಬೆರಳು ಈ ಕೃತಿಗಳು ಪಾಠದ ಸಂದರ್ಭದಲ್ಲಿ ಪ್ರವೇಶಿಸಿದವೆಂದಾದರೆ ಸರಿ; ರೈಗಳಾ ಮೇಲೆ ಸಮ್ಮನಿರರು. ಅವರ ವ್ಯಕ್ತಿತ್ವವೇ ಬದ ಲಾಗುವುದು. ಭಕ್ತಿಯ ಝುರಿಯಲ್ಲಿ ಮುಳುಗಾಡಿದವರಂತೆ ಭಾವೋಜ್ವಲರಾಗಿ ಆಶ್ಚರ್ಯ ಸ್ತಂಭಿತರಾಗುವರು. ಈ ಸ್ಥಿತಿ ವಿದ್ಯಾರ್ಥಿಗಳ ಪಾಲಿಗೆ ಅಪೂರ್ವ ಯೋಗವೆಂದರೂ ಹೆಚ್ಚಲ್ಲ

ಆ ಖಂಡಕಾವ್ಯಗಳಲ್ಲಿ--ನಾಟಕದಲ್ಲಿ ಸೆರೆಗೊಂಡ ಜೀವನ ಸಂದೇಶಗಳನ್ನು ಅಧಿಕಾರ ವಾಣಿಯಿಂದ ಸಾರುವ ಅವರ ರೀತಿ ಅದೊಂದು ಬಗೆಯ ರಸದೂಟ ವಿದ್ಯಾರ್ಥಿಗಳಿಗೆ. ಇಷ್ಟು ಮಾತ್ರ ವಲ್ಲ ಈ ಪಂಡಿತ ತಾನೋದಿದ ಇತರ ಕಾವ್ಯಗಳಲ್ಲಿ--ನಾಟಕ ಗಳಲ್ಲಿ ಮೈತೆತ್ತು ಬಂದ ಪಾತ್ರಗಳನ್ನು ಪ್ರಸ್ತುತ ಕೃತಿಗಳಲ್ಲಿ ರೂಪುದೋರಿದ ಪಾತ್ರಗಳೊಂದಿಗೆ ತೂಗಿನೋಡಿ, ವಿದ್ಯಾರ್ಥಿ ಗಳ ಬುದ್ಧಿಯನ್ನು ಒರೆಗಲ್ಲಿಗೆ ಹಚ್ಚುತ್ತಿರುವ ಕ್ರಮವದು ತನ್ನದೇ ಆದ ಶೈಲಿಯಲ್ಲಿ ರೂಪಿತವಾದ ಸಂವಿಧಾನ.—

ಹೀಗೆ ನಾಲ್ಕು ಗೋಡೆಗಳ ಆವರಣದಲ್ಲಿ ಕುಳಿತು, ಯೋಗ್ಯವಾದ ಸಂಪ್ರದಾಯಬದ್ಧವಾದ ಶಿಕ್ಷಣ ವಿಧಾನದಿಂದ ವಿದ್ಯಾರ್ಥಿಗಳಲ್ಲಿ 'ನಾಡು-ನುಡಿಗಳ' ಪ್ರೇಮವನ್ನು ಬಲಿಯಿಸಿ, ಸಾರ್ಥಕ ಶಿಕ್ಷಕರಾದ ರೈಗಳವರು, ವಿದ್ಯಾಥಿಗಳ ವ್ಯಕ್ತಿ ಸ್ವರೂ ಪಣೆಯಲ್ಲೂ ಮುಂದಿದ್ದಾರೆ.

ಭಾಷಣಕಲೆಯಲ್ಲಿ ತರಬೇತಿ, ಶ್ರೇಷ್ಠ ನಾಟಕಕಾರರ ನಾಟಕಗಳ ಅಭಿನಯ ನಿಸರ್ಗರಮಣೀಯಗಳಾದ ಪ್ರದೇಶಗಳಿಗೆ ಪ್ರವಾಸ, ಮೊದಲಾದ ಹತ್ತಾರು ಕಾರ್ಯಕ್ರಮಗಳನ್ನೆಸಗಿ, ವಿದ್ಯಾರ್ಥಿಗಳಲ್ಲಿರಬಹುದಾದ ಬಹುಮುಖ ಪ್ರತಿಭೆಗೆ ತಕ್ಕ ಉಣಿಸನ್ನಿತ್ತಿದ್ದಾರೆ; ಈಯುತ್ತಿದ್ದಾರೆ.

ತನ್ನ ಜೀವನಕ್ಕೆ ನವಚೇತನವನ್ನೆರೆದ ಈ ನಾಡಿನ 'ಪೊಸಡಿ ಗುಂಪೆಯು" ಎತ್ತರವನ್ನು--ಅಲ್ಲಿ ನಿಂತಾಗ ಕಾಣುವ ವೈಶಾಲ್ಯ ವನ್ನು ತನ್ನ ವಿದ್ಯಾರ್ಥಿಗಳಿಗೆ ತೋರಿ, ನೆಲದ ಋಣವನ್ನು ತೀರಿ ಸಿದ್ದಾರೆ ಈ ಭಾವನಾಸಂಪನ್ನರಾದ ಶಿಕ್ಷಕರು ........

**ಉಲ್ಲೇಖನೀಯ**—ನಮ್ಮ ನಾಡಿಗೆ ಸ್ವಾತಂತ್ರ್ಯ ದೊರ ಕಿದ ಸುವರ್ಣದಿನ. ಅಂದಿನ ಅಧ್ಯಾಪಕ ರೈಗಳು--ಸಾರ್ವಜನಿಕ ಸಭೆಗಳನ್ನು ಕೂಡಿಸಿ, ದೇಶಾಭಿಮಾನವನ್ನು ಕೆರಳಿಸುವ ಹಾಡು ಗಳನ್ನು ಹಾಡಿ, "ಐಕ್ಯಗಾನ"ವೆಂಬ ತನ್ನ ಶಾಶ್ವತಗೀತದ ಅಂತರ್ನಾದವನ್ನು ಕೇಳಿಸಿದ್ದಾರೆ; ಮಕ್ಕಳಲ್ಲದನ್ನು ಮಾರ್ದನಿ ಗೊಳಿಸಿದ್ದಾರೆ.

ಕ್ರಾಂತಿಕವಿಯೆಂದು, ಎದೆಗುಂದದ ಧೀರಕವಿಯೆಂದು ಅನ್ಯಾಯದ ಮುಂದೆ ತಲೆಭಾಗದ ಕೆಚ್ಚೆದೆಯವನೆಂದು-ಖ್ಯಾತ ರಾದ ಈ ಕವಿ-ಈ ಅಧ್ಯಾಪಕ 1948ರಲ್ಲಿ ರಾಷ್ಟ್ರಪಿತ ಗಾಂಧೀಜಿ ಯವರು ಅಗಲಿದಾಗ ಕರಗಿ-ಕೊರಗಿದ ನಿಟ್ಟನ್ನು ಅಂದಿನ ವಿದ್ಯಾ ರ್ಥಿಗಳು ಮರೆವಂತಿಲ್ಲ. ಆಸ್ತಿಕನಾಗಿ ರಾಷ್ಟ್ರಭಕ್ತನಾಗಿ, ಈ ಅಧ್ಯಾಪಕರು ಅಂದು ನಡೆಸಿದ್ದ ಗೀತಾ ಪ್ರವಚನ-ಭಾಷಣಗಳು ಕೇವಲ ತನ್ನ ಭಕ್ತಿಯ ಕಾಣಿಕೆಗಳಾಗಿರಲಿಲ್ಲ.

ತನ್ನ ಶಿಷ್ಯವೃಂದದ ಹೃದಯಗಳಲ್ಲಿ, ದೇಶಪ್ರೇಮದ, ಹಾಗೂ ಸ್ವಾತಂತ್ರ್ಯ ಪದದ, ಹೃದಯವನ್ನು ಬೇರೂರಿಸು

ವುದಕ್ಕಾಗಿ ಕೈಕೊಂಡ ಸಮನ್ವಯವಾಗಿತ್ತು. ನೂರಾರು ಕಾರ್ಯಗಳಲ್ಲಿ ವ್ಯಾಪೃತರಾಗಿದ್ದರೂ, ತನ್ನ ಜೀವನಕ್ಕೆ ಅತಿಶಯ ಸಂಪತ್ತನ್ನೊದಗಿಸಿದ 'ಅಧ್ಯಾಪನ ಯಜ್ಞ'ವನ್ನು ನಿಷ್ಠೆಯಿಂದ ಇಂದಿಗೂ ಪಾಲಿಸುತ್ತಿರುವರು.

ಅಲ್ಲಿ ಸಲ್ಲಬೇಕಾದ ಹವಿಸ್ಸನ್ನು ಭಕ್ತಿಯಿಂದ ಸಲ್ಲಿಸುತ್ತಿರುವರು. ನಿಗರ್ವಿಗಳಾಗಿ, ಸತತಾಭ್ಯಾಸಿಗಳಾಗಿ, ಸಚ್ಚಾರಿತ್ರ್ಯ ಸಂಪನ್ನರಾಗಿ, ವಿದ್ಯಾರ್ಥಿಗಳ ಮನೋಧರ್ಮವನ್ನರಿತು ಅಧ್ಯಾಪನವೆಸಗುವ ಈ ಕುಶಲ ಶಿಲ್ಪಿ ಧನ್ಯರು!

*　　*　　*　　*

**ಕ್ರಾಂತಿಯ ಕಿಡಿ-ರೈಗಳು! ಶಾಂತಿಯ ವಾಹಕ ರೈಗಳು!**

"ಇತಿಹಾಸ ವಿಜ್ಞಾನ ರಾಜಕೀಯಗಳನ್ನು
ಓದುತಿರೆ ರೋಮಾಂಚವೇಳುತಿತ್ತು.
ಇಪ್ಪತ್ತು ವರ್ಷದಾ ತಾರುಣ್ಯ ಕಾಲವದು
ಸ್ವಾತಂತ್ರ್ಯ ಸಂದೇಶ ಮೊಳಗುತಿತ್ತು....
ಸಾಹಿತ್ಯ ಸಂತೋಷ-ಸ್ವಾತಂತ್ರ್ಯ ಸಂದೇಶ
ಎನ್ನೆದೆಯನರಳಿಸಿದೆ-ಮನವ ಕೆರಳಿಸಿದೆ... "

ಎಂದು ಆತ್ಮ ಕಥೆಯ ಮಿಂಚನ್ನು ಹಾಯಿಸಿದ ಕವಿ ಕಯ್ಯಾರರು ದಶಕಗಳ ಹಿಂದೆ 'ಕ್ರಾಂತಿ ಕಿಡಿ'ಯಾಗಿದ್ದುದು ಆಶ್ಚರ್ಯವಲ್ಲ. ಸ್ವಾತಂತ್ರ್ಯಾನಂತರದ ಇಂದಿನ ದಿನಗಳಲ್ಲಿ ಅದೇ ಕವಿ 'ಆಧ್ಯಾತ್ಮಿಕವಾದ ವಿಚಾರಗತಿಯಲ್ಲಿ ಜೀವನದ ಸತ್ಯಾಂಶದ ಸಂಶೋಧನೆಯಲ್ಲಿ ಆಸಕ್ತರಾಗಿರುವುದನ್ನೂ ನಾವು ಕಾಣುತ್ತೇವೆ. ಕ್ರಾಂತಿಯ ವರ ಪುತ್ರನಾಗಿರುವುದರಿಂದ, ಆ ಕಾಲದ 'ನವ-ನವೋನ್ಮೇಷ ಭರಿತವಾದ ಸಾಹಿತ್ಯಕ ಮನೋ ಧರ್ಮವು" ಇಂದಿನ ಸಾಹಿತ್ಯ ರಚನೆಯಲ್ಲೂ ಕೂಡಿನಿಂತಿರುವುದು ಆಶ್ಚರ್ಯ

ವಲ್ಲ; ಆದರೆ ಅವರ ಸಂದೇಶ ಮಾತ್ರ 'ಪಾಂಚಜನ್ಯ' ಧ್ವನಿಯಂತೆ ಶುಭಮಯ !

ನಿರರ್ಗಳವಾದ ಶೈಲಿಯಲ್ಲಿ ತಾನೆತ್ತಿಕೊಂಡ ವಿಷಯದ ಮೇಲೆ ಅಧಿಕಾರ ಸಂಪನ್ನತೆಯಿಂದ ಮಾತನಾಡಬಲ್ಲ, ರೈಗಳವರ 'ವಿಚಾರಭರಿತವಾದ, ಆವೇಶದ ಚೌಕಟ್ಟಿನಲ್ಲಿ ನಿವೇಶಿತವಾದ-ಭಾಷಣಗಳನ್ನು, ದಶಕದ ಹಿಂದೆ ಕೇಳಿದವನು, ಅದೇ ನಾದವನ್ನು ಆಸ್ವಾದಿಸಿದರೂ, ಹೃದಯಸ್ಪರ್ಶಿಯಾಗಿ ನಿಲ್ಲುವ ಸಂಚಾರವನ್ನು ಬೇರೆಯಾಗಿಯೆ ಕಾಣಬಲ್ಲನು ಇಂದು!

'ಕ್ರಾಂತಿಯ ಕಹಳೆಯನ್ನೂದಿ-ಸ್ವಾತಂತ್ರ್ಯದೀಕ್ಷೆಯನ್ನು ತೊಟ್ಟ ಅಂದಿನ ಯುವಕ, ಅಂದಿನ ಕ್ರಾಂತಿಯ ಕಿಡಿ. ಇಂದು ಉಪನಿಷತ್ತಿನ ಮಂತ್ರಗಳನ್ನು ಕೇಳಿಸುತ್ತಿದ್ದಾರೆ.

**ಕ್ರಾಂತಿಯ ಮುನ್ನಡೆ—**

"ಬಡವ ಬಲ್ಲಿದ ನೆನುವ-ಕೀಳುಮೇಲೆಂದೆನುವ
ಹೊಲೆಯ ಬ್ರಾಹ್ಮಣ ಬಿಳಿ ಕರಿಯನೆನುವ ।
ವಿಷಮ ವಿಷಮಯ ಸಮಾಜದ ಬೇರಕಿತ್ತೊಗೆಯೆ
ಕೊಡಲಿ ಲೇಖನಿಬೇಕು-ರಕ್ತವದಕೆ ಮಸಿ" ॥

ಎಂದು "ಶ್ರಮಜೀವಿಗಳ ಬೆವರಲ್ಲಿ—ಸುಖವನ್ನು ಸೃಷ್ಟಿಸಿ ಮೆರೆವ ಮದಾಂಧರನ್ನು ಕಂಡು ಕೆರಳಿದ ಹುಲಿಗಳಿವರು. ಸಮಾಜ ಕ್ರಾಂತಿಯ ಕವಿಯಾಗಿ-ಮುಂದೆ 1947ರ ಕಾಲದಲ್ಲಿ ಆಶ್ರಿತ ರಾಜರಿಂದಾಗುತ್ತಿದ್ದ ದಬ್ಬಾಳಿಕೆಯನ್ನು ಜ್ವಾಲಾಮುಖಿಯಾಗಿ ಸಿಡಿದು ನಿಂತು ಇದಿರಿಸಿ, ಶೋಷಿತ ಪ್ರಜೆಯನ್ನು ಕಾಲಭೈರವನ ರೂಪಕ್ಕೆ ತಂದಿರುವುದನ್ನು ಕಾಣಲು ಯಾರೂ ಮರೆವಂತಿಲ್ಲ.

ಇದರಂತೆಯೆ 1947ರಲ್ಲಿ ರಾಷ್ಟ್ರವು ಇಬ್ಭಾಗವಾಗಿ ಹಂಚಲ್ಪಟ್ಟಾಗ ಕುದಿದ ರೈಗಳು

"ಕಾಮಧೇನುವನಿಂದು, ಗರಗಸದಿಕೊರೆಯುವರೆ........
ಒಂದೆ ತೊಟ್ಟಿಲೊಳಿಟ್ಟು ತೂಗಿರುವ ತಾಯ ಕೈ
ಕಡಿಯುತಿಹರೆ?

ಅಮೃತಕಲಶವನಿಂದು ತರುವಂದು
ಬೆಕ್ಕಿಗೊಂದಿರಬೇಕೆ ಬೇರೆ ಪಾಲು...."
ಎಂದು ನೊಂದು ನುಡಿದಿದ್ದಾರೆ.......

ರಾಜಕೀಯ—ರಾಷ್ಟ್ರೀಯ—ಸಾಮಾಜಿಕ ಕ್ಷೇತ್ರಗಳಲ್ಲಿ ಜೀವನ ಮತ್ತು ಲೇಖನಿಯನ್ನು ಒಟ್ಟೊಟ್ಟಾಗಿ ಮಸೆಯುತ್ತಿದ್ದ ಕಯ್ಯಾರರು

"ಧನಿಕರೊಂದೇ ಜಾತಿ, ಬಡವರೊಂದೇ ಜಾತಿ,
ಜಾತಿಯೆರಡೇ ಜಗದಿ ಎಲ್ಲು ನೋಡೆ!
ಆಳೊಡೆತನವು ಹೋಗಿ, ವಿಶ್ವವಿಷಮತೆಸೀಗಿ
ಪ್ರೀತಿ ಸಮತೆಗಳಾಗಿ ಗೆಲ್ಲುನಾಡೆ"

ಎಂದು ಎದೆಯಾಳದಲ್ಲಿ ನೆಲೆನಿಂತ ಆತ್ಮ ಸಂದೇಶವನ್ನು ಸಾರಿ, ಸಮಾಜದಲ್ಲಿ ಬಾಳಿ ಬದುಕಬೇಕಾದ ದಾರಿಯನ್ನು ತೋರಿ, ಸರ್ವತ್ರ ಜಾಗೃತಿಯ ಕಹಳೆಯನ್ನೂದಿದ್ದಾರೆ.

"ತಾಯ್ನಾಡನೆಲದಲ್ಲಿ ಹಿಡಿಮಣ್ಣು ಹುಡಿಯಲ್ಲಿ
ಬೆರೆವ ಭಾಗ್ಯವೆ ಸಾಕು-ಸಾಯುಜ್ಯವೊಲ್ಲೆ........

ಎಂದನ್ನುತ್ತ ಶ್ರೀಮುಖದಿಂದ ಐಕ್ಯಗಾನಕ್ಕೆ ಸರಿದು, ಅಲ್ಲಿಂದ ಪುನರ್ನವದ ಹೆಬ್ಬಾಗಿಲಿಂದ ಸಾಗಿ ನಡೆದ ರೈಗಳು ಜೀತನವನ್ನು ಕಂಡಾಗ-ಶಾಂತಿಯ ವಾಹಕರಾಗಿ 'ನಡೆ-ನುಡಿಗಳಲ್ಲಿ' ಆಧ್ಯಾತ್ಮಿಕತೆಯ ಭಾವವನ್ನು ತುಂಬತೊಡಗಿದರು.

"ಶಾಖೋಪಶಾಖ ಪ್ರಕಾಂಡದ ಮಹಾವೃಕ್ಷ
ಬೀಜದಲಿ ಸಾಜವಂ ಸೇರಿಪಂತೆ,
ವಿಶ್ವವಿಜಯಿೊ ಸಾಹಸದ ಕೇತು ಚೇತನಂ
ನವನವೋನ್ಮೇಷದಿಂದವತರಿಸಿದೆ
ಜನ್ಮ ಜನ್ಮಕೆ "ನವ್ಯವೀ" "ಚೇತನಂ"

ಎಂದು ಚಿಂತನೆಗೆ ಪ್ರೇರಕವಾದ ಚೇತನದ್ವಾರವನ್ನು ತೆರೆದು, ವಿಶ್ವವಿಜಯಿೊ ಸಾಹಸಕೆ ಮೂಲವಾದ ಚೇತನದ ತಂತಿ-ತಂತಿಗಳನ್ನು ಮೀಟಿ, ಕಠೋಪನಿಷತ್ತಿನ ಮಂತ್ರವನ್ನು ನಾಂದಿಯಾಗಿ ಹಾಡಿ, ಮಂತ್ರಗಳನ್ನು ಹಾಡಿದರು. ಪ್ರಕೃತಿ-ಪುರುಷ, ಸುಖ ದುಃಖ, ಕ್ರಾಂತಿ ಶಾಂತಿಗಳ ಮನೋಧರ್ಮವನ್ನು ತುಂಬಿ ಸಾಗಿದ ಈ ಸಂದೇಶ ವಿವಿಧ ರಾಗ-ತಾಳಗಳಲ್ಲಿ ಬಣ್ಣವೇರಿತು. ಕೊನೆಯಲ್ಲಿ

"ಮಣಿವೆ ಬ್ರಹ್ಮಂಗೆ
ಮಣಿವೆನು ನಿನಗೆ ವಾಯುವೇ
ನೀನೆಯಾಗಿರುವೆ ಪ್ರತ್ಯಕ್ಷ ಬ್ರಹ್ಮಂ
ನಿನ್ನನೇ ಪೇಳ್ವೆ ಪ್ರತ್ಯಕ್ಷ ಬ್ರಹ್ಮನೆಂದಾನು
..........................................

ಓಂ ಶಾಂತಿಯ್ಕೆ, ಶಾಂತಿಯ್ಕೆ, ಶಾಂತಿಯ್ಕೆ"

ಎಂದು ಉಪನಿಷತ್ ಶಾಂತಿ ಮಂತ್ರಗಳನ್ನು ಹಾಡಿ ಮಂಗಲವನ್ನು ಕೋರುತ್ತಾರೆ.

ದೇಶ ಕಾಲಗಳನ್ನು ಗುರುತಿಸಿಕೊಂಡು, ಸಾಹಿತ್ಯಶಕ್ತಿಯ ಅಂತಃ ಸ್ವರೂಪವನ್ನು ಪರಿಭಾವಿಸಿ ನಡೆದುದರಿಂದಲೆ, ರೈಗಳು ಕ್ರಾಂತಿಪಥದಲ್ಲಿ ಧೀರರಾಗಿ ಮುನ್ನಡೆದರು. ಜನತೆಯ ಮುಂದೆ ಅವರಾಗ ಕ್ರಾಂತಿ ಕವಿಯಾದರು. ಸಮಾಜದ ನವಚೇತನಕ್ಕಾಗಿ,

ಸಾಹಿತ್ಯ-ಸಮಾಜ-ಉಪನಿಷತ್ ಇವುಗಳ ವಿರಾಟ್ ಸ್ವರೂಪ
ವನ್ನು ಹಾಡಿ ಆಧ್ಯಾತ್ಮಿಕ ಕವಿಯಾದರು. ಆದುದರಿಂದ ಕ
ಕಯ್ಯಾರರ ಲೇಖನಿ ಸಮಾಜ ಸಂಜೀವಿನಿಯಾಯಿತು !

ಭಾಗ ೪

## ಗದ್ಯದ ಸಿದ್ಧಹಸ್ತರು

"ಗದ್ಯಂ ಕವೀನಾಂ ನಿಕಷಂ ವದಂತಿ"—ಮಾತಿದು
ಸಾರ್ವಕಾಲಿಕ ಸತ್ಯ. ಪದ್ಯದಲ್ಲಿ ನೈಪುಣ್ಯವನ್ನು ಗಳಿಸಿದ್ದ
ರೈಗಳು ಗದ್ಯಸಾಹಿತ್ಯವನ್ನು ಬರೆದು, ಅದರ ಸೌರಭವನ್ನೂ
ಹರಡಿದ್ದಾರೆ; ಕೃತಕೃತ್ಯರಾಗಿದ್ದಾರೆ. "ಉತ್ತಮ ಕಾವ್ಯವನ್ನು
ರೂಪಿಸಬಲ್ಲವನು ಉತ್ತಮವಾದ ಗದ್ಯವನ್ನು ಬರೆಯುಲಾರನು—
ಗದ್ಯವನ್ನು ಬರೆಯಲು ಹೋಗಿ ಕೈಸುಟ್ಟುಕೊಂಡವನು ಕವಿ
ಯಾಗುತ್ತಾನೆ" ಎಂಬೀ ಮಾತನ್ನು ಮೀರಿ ನಿಂತಿರುವರು
ರೈಗಳು.

ಅಧ್ಯಾಪಕ ವೃತ್ತಿಯಲ್ಲಿದ್ದಂತೆ, ಸಾಹಿತ್ಯ ನಿರ್ಮಿತಿಯಲ್ಲೂ
ರೈಗಳ ದಾರಿ, ತನ್ನದೇ ಆದ ಹೊಸ ನಿರ್ಮಾಣ. ಈ ದಾರಿ
ಯಲ್ಲಿ ನಡೆಯುವ ರೈಗಳನ್ನು ಇತರರಿಗೆ ಅನುಕರಿಸಲು ಸಾಧ್ಯ
ವಿಲ್ಲ. ಶರೀರದಲ್ಲೂ ಬೃಹತ್ತನ್ನು ಸಾಧಿಸಿದ ಈ ಸಾಹಿತ್ಯಕ,
ಸಾಹಿತ್ಯ ತಪೋವನದಲ್ಲೂ ಬೃಹನ್ಮಂತ್ರವನ್ನುಚ್ಚರಿಸುತ್ತಾರೆ
ಬಂಡಿಗಟ್ಟಲೆ ಪುಸ್ತಕಗಳು ಪ್ರಕಟವಾಗುತ್ತಿರುವ ನಮ್ಮ ನಾಡಿನಲ್ಲಿ,
ಅಗ್ಗದ ಜನಪ್ರಿಯತೆಯನ್ನು ಗಳಿಸಲು ರೈಗಳು ಮನಮಾಡಲಿಲ್ಲ.
ಗುಣದಲ್ಲಿ ಎಚ್ಚರವಿದ್ದ ಸಾಹಿತ್ಯಿಕರಿವರು, ಮನೆತುಂಬ-ಮನ
ತುಂಬ ಉತ್ತಮ ಸಾಹಿತ್ಯಗಳನ್ನು ಕೂಡಿಟ್ಟು, ಅವುಗಳದೇ
ಧರ್ಮದಲ್ಲಿ ಕಾಲಿರಿಸಿ ಸಾಗಿದರಲ್ಲದೆ, ತನ್ನ 'ಸಾಹಿತ್ಯಕ್ಕೆ' 'ಗಣ

ನೆ'ಯ ಪ್ರಥಾನ್ಯವನ್ನು ಕೊಡಲಿಲ್ಲ. ಚಿಕ್ಕಂದಿನಲ್ಲೆ ಕತೆಗಳನ್ನು ಬರೆವ ಶಕ್ತಿಯನ್ನು ಪಡೆದಿದ್ದ—ವ್ಯಕ್ತಿಯಲ್ಲಿರುವ ಶಕ್ತಿಯನ್ನೆ ಆದು ಲೇಖನಿಯ ಮೂಲಕ ಬಿಂಬಿಸಬಲ್ಲ—ಈ ಕಯ್ಯಾರರು, ಮನಸ್ಸಿರುತ್ತಿದ್ದರೆ ತನ್ನ ಕಾದಂಬರಿಗಳಿಗೆ ಶತಮಾನೋತ್ಸವವನ್ನು ಸಾರುತ್ತಿದ್ದರೊ ಏನೊ! ಅದವರಿಗೆ ಬೇಡವಾಯಿತು!

ಕ್ರಾಂತಿಕಾಲದ ಕಿಡಿಯಾಗಿ ಬೆಳಗಿದ ರೈಗಳು, ತನ್ನ ಮಾನಸಿಕ ಬೌದ್ಧಿಕಗತಿಯಲ್ಲಿ ರಾಷ್ಟ್ರ ಪ್ರೇಮದ ಶಕ್ತಿಯನ್ನು ಮೈಗೂಡಿಸಿಕೊಂಡು

"ನಾಡು ನುಡಿಗಳಿವೆರಡು ನನ್ನೆದೆಯನರಳಿಸಿವೆ"

ಎಂಬ ನಿಶ್ಚಲ ಮನೋಬಲದಿಂದ ಮುನ್ನಡೆದು "ರಾಷ್ಟ್ರಕವಿ-ಗೋವಿಂದಪೈ" ಎಂಬ ಕೃತಿಯನ್ನೂ "ರತ್ನರಾಶಿ" ಎಂಬ ವ್ಯಕ್ತಿ ಚಿತ್ರ ಸಂಕಲನವನ್ನೂ ಬರೆದು ತನ್ನ ಬಯಕೆಯನ್ನು ಕೈಗೂಡಿಸಿ ಕೊಂಡರು. ಇವೆರಡು ಕೃತಿಗಳು ಶಾಶ್ವತವಾಗಿ ಉಳಿಯ ಬಲ್ಲುವು.

'ರಾಷ್ಟ್ರಕವಿ ಗೋವಿಂದ ಪೈ'—ಕೃತಿಯಿದು ಗುರುವಿನ ಚರಣದಲ್ಲಿ ಶಿಷ್ಯನು ವಿನೀತನಾಗಿ ಸಮರ್ಪಿಸಿದ ಕಾವ್ಯಕುಸುಮ ವೆಂದೇ ನನ್ನೆಣಿಕೆ. 'ಪೈ'ಗಳ ಹೆಸರೆತ್ತಿದೊಡನೆ, ಎತ್ತರವಾದ ಕರಿಹಲಗೆಯಲ್ಲಿ ಬರೆವಾಗ ಮಾತ್ರ ಬಗ್ಗುವ ಈ ಗುರುಭಕ್ತಿ ಸಂಪನ್ನರಾದ ಕವಿ, ವಿನಯಾವನತರಾಗುವರು! ಅಷ್ಟೊಂದು ಹಿರಿತನವನ್ನು ಪೈಗಳಲ್ಲಿ–ರೈಗಳು ಕಂಡಿದ್ದಾರೆ.

ಈ ಕೃತಿಯಲ್ಲಿ ದಿ| ಪೈಗಳವರ ಉನ್ನತ ರಚನೆಗಳ ಪರಿಚ ಯಾತ್ಮಕವಾದ ವಿಮರ್ಶೆಯಿದೆ ದಿ| ಪೈಗಳವರು ಸಾರಸ್ವತ ಲೋಕಕ್ಕೆ ಸಲ್ಲಿಸಿದ, ಅಪೂರ್ವ ಕಾಣಿಕೆಗಳ ಹಿರಿತನವನ್ನು ಲೇಖ ನಿಗೆ–ಚಿಕ್ಕದಾದರೂ ಚೊಕ್ಕವಾದ ಪುಸ್ತಕವಿದು.

ತ್ತರವಾದ ಸಂದೇಶ, ಇವನ್ನು ಗಿಳಿವಿಂಡಿನಿಂದಾರಂಭಿಸಿ, ಸ್ಥೂಲವಾದರೂ ಸಾಕಷ್ಟು ತಿಳಿಯಗಾಗಿ, ಸ್ಫುಟವಾಗಿ ಉದಾಹರಣೆಗಳನ್ನಿತ್ತು ತಿಳಿಸಿದ್ದಾರೆ ರೈಗಳು.

"ತತ್ತ್ವ ಪ್ರತಿಪಾದನೆ--ದೃಷ್ಟಾಂತ ನಿದರ್ಶನಗಳ ಮೂಲಕ ಆಗಬೇಕೆಂಬುದನ್ನೂ,—"ದರ್ಶನ ಪ್ರಾಪ್ತಿಗಾಗಿ, ನಿರಂಕುಶಮತಿಯ ಸ್ವಾತಂತ್ರ್ಯವನ್ನು ಮುಂದೊಡ್ಡಿ ಬರೆಯಬೇಕೆಂಬುದನ್ನೂ–ಮನಗಂಡ--ಲೇಖಕರಿವರು. "ವಿಮರ್ಶೆಯ ಕ್ಷೇತ್ರದಲ್ಲಿ" ತನಗಿದ್ದ ಶಕ್ತಿಯನ್ನು ಚೆನ್ನಾಗಿ ತೋರಿದ್ದಾರೆ.

ಈ ಪುಸ್ತಕದಲ್ಲಿರುವ ಪ್ರಾಸ್ತವಿಕ ವಿಚಾರ ಮತ್ತು ಕೊನೆಯ ಅಧ್ಯಾಯದಲ್ಲಿ ದಿ। ಮಂಜೇಶ್ವರ ಗೋವಿಂದ ಪೈಗಳ ವ್ಯಕ್ತಿತ್ವ–ಮನೆತನ--ಸಂಪರ್ಕ ಇವುಗಳನ್ನು ಸೂಕ್ಷ್ಮವಾದರೂ ವ್ಯಕ್ತವಾಗಿ ನಿರೂಪಿಸಿ" ನಮ್ಮ ಜಿಲ್ಲೆ--ದಕ್ಷಿಣ ಕನ್ನಡ ಜಿಲ್ಲೆ, ಒಬ್ಬ ರತ್ನಾಕರ ವರ್ಣಿಯನ್ನು ಪಡೆಯಿತು; ಒಬ್ಬ ಪಾರ್ತಿಸುಬ್ಬನನ್ನು ಜೋಗುಳಿಸಿತು; ಒಬ್ಬ ಮುದ್ದಣನನ್ನು ಲಾಲಿಸಿತು. ಒಬ್ಬ ಪಂಜೆಯನ್ನು ಪಾಲಿಸಿತು; ಒಬ್ಬರು ಗೋವಿಂದ ಪೈಗಳನ್ನು ಹರಸಿತು!" ಎಂದಾಡಿ, ತನ್ನ ವಿಶ್ವಾಸದ ತಾನು ಮೆಚ್ಚುವ "ಕನ್ನಡದಲ್ಲಿ ವಿನೂತನ ಕ್ರಾಂತಿಯನ್ನೆಸಗಿದ ಕಾರಣ ಪುರುಷರನ್ನು "ಭಕ್ತಿಯಿಂದ ನಮಿಸಿದ್ದಾರೆ". ಈ ಭಕ್ತಿಯ ಪವಿತ್ರ ಶಬ್ದಾಂಜಲಿಗಳು ಕೇವಲ ಅಕ್ಷರಗಳ ಜೋಡಣೆಯಲ್ಲ; ಶ್ರದ್ಧಾನ್ವಿತನಾದ ಕನ್ನಡಿಗನ ಹೃದಯದಲ್ಲಿ ದನಿಗೊಳಿಸುವ ಸಾಹಿತ್ಯಸ್ಪಂದನಗಳು.

**ರತ್ನರಾಶಿ**

"ಮತ ಭ್ರಾಂತಿಯನ್ನು ಬಿಟ್ಟು–ಮತಿಯ ದೀವಿಗೆ ಹಿಡಿದಾಗ ದರ್ಶನ ಸುಲಭ" ಎಂದಾಡಿದ ರಾಷ್ಟ್ರಕವಿ ಕುವೆಂಪು ಅವರ ಘೋಷಣೆಯನ್ನು ಚೆನ್ನಾಗಿ ಅರ್ಥವಿಸಿದ ಪ್ರಸ್ತುತ ಲೇಖ

ಕರು ಜಾತಿಭೇದ-ಮತಭೇದಗಳನ್ನು ದೂರವಿರಿಸಿ ದೇಶದ ಉನ್ನತಿಗಾಗಿ "ಕಾಯಕವೆ ಕೈಲಾಸ"ವೆಂಬ ಅಮೃತವಾಣಿಯನ್ನು ಅಕ್ಷರಶಃ ಸಾರ್ಥಕಗೊಳಿಸಿದ "ದೇಶ ಧುರೀಣರನ್ನು" ಸಮ ದೃಷ್ಟಿಯಿಂದ ಮನನಮಾಡಿ ಚಿತ್ರಿಸಿರುತ್ತಾರೆ.

ಇಪತ್ತೆರಡು ಮಂದಿ ಯುಗ ಪುರುಷರನ್ನಿಲ್ಲಿ ಕಾಣಬಹುದು. ಅವರೆಲ್ಲರೂ ಭಾರತ ದೇಶದ ಇತಿಹಾಸದಲ್ಲಿ ಒಂದಲ್ಲ-ಒಂದು ಸುವರ್ಣ ರೇಖೆಯನ್ನು ಮಾಡಿಸಿ, ಧನ್ಯತೆಯನ್ನು ಸಾಧಿಸಿದವರು.

ಶತಮಾನಗಳ ಕಾಲ ದಾಸ್ಯದಲ್ಲಿ ಕೆಡೆದಿದ್ದು, ಸರ್ವವಿಧ ದಲ್ಲೂ ತನ್ನತನವನ್ನು ಕಳೆದುಕೊಂಡ ರಾಷ್ಟ್ರವೊಂದು, ಪುನಃ ಚೇತರಿಸಿ ತಲೆಯೆತ್ತಿ ನಿಲ್ಲಬೇಕಾದರೆ-ರಾಷ್ಟ್ರಶಕ್ತಿಗಾಗಿ-ರಾಷ್ಟ್ರೋ ನ್ನತಿಗಾಗಿ ನಡೆದ ಬಲಿದಾನಗಳ ಅರಿವನ್ನು ಗಳಿಸಬೇಕಾದುದು-ಅತ್ಯಂತಾವಶ್ಯವೆಂಬುದನ್ನು ಮನಗಂಡ ರೈಗಳು, ತನ್ನೀಕಿರು-ಕೃತಿಯಲ್ಲಿ "ಜೀವರತ್ನ"ಗಳ ಉಜ್ವಲ ಬೆಳಕನ್ನು ತುಂಬಿರುತ್ತಾರೆ. ಅದು ಅಹಿಂಸೆ-ತ್ಯಾಗ-ಸತ್ಯ ಇವುಗಳ ವರ್ಣ ವೈವಿಧ್ಯವನ್ನು ಹಾಯಿಸಿ, ಜನತೆಯ ಚಿಂತನೆಯನ್ನು "ಪುನರ್ನವ" ಗೊಳಿಸು ತ್ತಿದೆ.

'ರತ್ನರಾಶಿಯಲ್ಲಿ' ಕಣ್ಣೆದುರು ಸುಳಿದ ವ್ಯಕ್ತಿಗಳು ಜೀವಂತ ಪಾತ್ರಗಳಂತೆ ನಮ್ಮೆದುರು, ಮೈವೆತ್ತು ನಟಿಸುತ್ತಾರೆ. ಭವ್ಯವೇದಿ ಕೆಯ ಮಹಾಸಂದರ್ಶನ ಭಾಗ್ಯವನ್ನು ಪಡೆಯುತ್ತೇವೆ.

ತನ್ನನ್ನು, ತನ್ನ ಪುತ್ರನನ್ನು, ಪುತ್ರಿಯರನ್ನು ಹೆಚ್ಚೇಕೆ ಇಂದ್ರಪದವಿಗೆ ತುಲ್ಯವಾದ ತನ್ನ ಸಂಪತ್ತನ್ನು ರಾಷ್ಟ್ರ ನಿರ್ಮಾಣ ಕ್ಕಾಗಿ ಧಾರೆಯೆರೆದು, "ಸ್ವತಂತ್ರ ಭಾರತದಲ್ಲೇ ನಾನು ಸಾಯು ತ್ತೇನೆ" ಎಂದಾಡಿದ ಮೋತಿಲಾಲ ನೆಹರು, ಅಚಲವಾದ-ಅನು

ಪಮವಾದ ದೇಶ ಭಕ್ತಿಯಿಂದ ತನ್ನ ಸರ್ವಸ್ವವನ್ನೂ ತ್ಯಾಗ ಮಾಡಿದ ಕಾರ್ನಾಡು ಸದಾಶಿವರಾಯ, ಕಾಯ ಕಷ್ಟಗಳನ್ನು ಲೆಕ್ಕಿಸದೆ, ಪರ್ವತೋಪಮವಾದ ತನ್ನ ರಾಷ್ಟ್ರ ಪ್ರೇಮವನ್ನು ವನ್ನು "ವಿಶ್ವಾಸ-ಸಾಧುತ್ವ"ಗಳ ತಟ್ಟೆಯಲ್ಲಿರಿಸಿ, ಶ್ರೀಮುಖ ಸಂದರ್ಶನಕ್ಕಾಗಿ ಉತ್ಸಾಹಿತರಾಗಿದ್ದ ಪ್ರೊ। ಭನ್ಸಾಲಿ, ಭಾರತದ ಸ್ವಾತಂತ್ರ್ಯ ಜ್ಯೋತಿಯನ್ನು ಹಿಡಿದೆತ್ತಿ ನಿಲಿಸಿದ ವೀರ ಯೋಧ ಜವಾಹರಲಾಲ ನೆಹರು ಮೊದಲಾದ ಇಪ್ಪತ್ತೆರಡು ಧನ್ಯ ಜೀವನ ಗಳ ಭವ್ಯೇತಿಹಾಸವನ್ನು ಓದಿ ಮುಗಿಸುವಾಗ, ನಾವು ಈ ಕೃತಿಯ ಸಾರ್ಥಕತೆಗಾಗಿ ಮೆಚ್ಚಿಕೆಯನ್ನು ಒತ್ತುವವರೊಂದಿಗೆ "ಕಿರಿದರೊಳೆ ಪಿರಿದು ಅರ್ಥ"ವನ್ನು ಕೊಡುವ ಶ್ರೀ ರೈಗಳವರ ಭಾವಬಂಧುರವಾದ ಗದ್ಯ ಶೈಲಿಗೆ ಬೆರಗಾಗದಿರೆವು.

ಅರ್ಥಗರ್ಭಿತವಾದ ವಚನನಿಚಯ, ವ್ಯಕ್ತಿತ್ವದ ನೆಲೆ ಗೊಪ್ಪಿದ ನಿರೂಪಣೆ, ಹೃದಯಸ್ಥಾಯಿಯಾಗಿ-ಶಾಶ್ವತವಾಗಿ-ನಿಲ್ಲಬಹುದಾದ ಸಂದೇಶವಚನಗಳು, ಬೃಹತ್ತಿನ ಸಂಕೇತಗಳು-ಇವನ್ನೆಲ್ಲ ಪರಿಮಿತವಾದ ಚೌಕಟ್ಟಿನಲ್ಲಿ ನಿಲ್ಲಿಸಿ, "ವ್ಯಕ್ತಸ್ವರೂಪ" ವನ್ನು ತೋರಿದ ಜಾಣ್ಮೆಯಿದು ಅಂದಲ್ಲ ಇಂದೂ ಪ್ರಶಂಸನೀಯ ವಿದೆ; ರೈಗಳವರ 'ಪ್ರತಿಭೆ'ಯ ಥಳಕನ್ನು ಮತ್ತು ಶಕ್ತಿಯನ್ನು ಬಿಂಬಿಸುವ ದರ್ಪಣಗಳೇ ಕೃತಿಗಳೆರಡೆಂದು ಹೇಳಿದರೆ, ತಪ್ಪಾ ಗದು.

1948ನೆಯ ಇಸವಿಯು, ಮಾನ್ಯ ಮದರಾಸು ಸರಕಾರ ದಿಂದ "ಉತ್ತಮ ಜೀವನ ಚರಿತ್ರೆ" ಎಂಬ ನೆಲೆಯಲ್ಲಿ ರತ್ನರಾಶಿಗೆ ಗೌರವಕೊಡಿಸಿ ಬಹುಮಾನಿಸಿತು.

ಈ ಕೃತಿಯು, ಪ್ರೌಢ ಶಾಲೆಗಳಿಗೆ ಉಪ ಪಠ್ಯವಾಗಿ ದ್ದುದೂ ಗಮನೀಯ.

**ಕಥಾ ಸಂಕಲನ:—**

"ನನ್ನ ಎಲುಬನ್ನು ಹೊತ್ತಿಸಿ, ಮಾಂಸವನ್ನು ಬೇಯಿಸಿ ಕೊಡಲೇ"–"ಅನ್ನದೇವರು ಕಥೆಯಲ್ಲಿ ಕೇಳಿಸಿದ ಮಾತಿದು. ಬಡತನದ ಉಗ್ರತೆಯನ್ನು, ಹಸಿವೆಯು ಸಂಕಟವನ್ನು ಅಷ್ಟೊಂದು ಮಾರ್ಮಿಕವಾಗಿ ರೂಪಿಸಿ "ಯಾರ ದೇವರು ಬಂದರೂ ಅನ್ನ ದೇವರು ಬರಲಿಲ್ಲ" ಎಂಬ ಮಾತಿಗೆ ಪ್ರಾಧಾನ್ಯ ನೀಡಿ - ರೈಗಳು "ಜೀವನದಲ್ಲಿ ನಾನು ಕಂಡ ಕೆಲವು ನೋಟಗಳು ನನ್ನ ಕತೆಗಳಿಗೆ ಪ್ರೇರಕಗಳು" ಎಂದು ಹೇಳಿಕೊಂಡು "ಅನ್ನದೇವರು ಮತ್ತು ಇತರ ಕಥೆಗಳು" ಎಂಬ ಕಥಾ ಸಂಕಲನವನ್ನು ದಶಕಗಳ ಹಿಂದೆಯೇ ಬರೆದರು.

ಚಿಕ್ಕ ಕತೆಗಳು ಬಹುತೇಕವಾಗಿ ಬೆಳೆದು ನಿಂತ ಇಂದಿನ 'ಕಥಾಯುಗ'ದೊಂದಿಗೆ ರೈಗಳವರ ಕತೆಗಳನ್ನು ಹೋಲಿಸುವುದು ಸರಿಯಲ್ಲ. ಜೀವನ ಚರಿತ್ರೆಗಳು–ಕಥೆಗಳು ತೀರಾ ಕಡಿಮೆಯಿದ್ದ ಆ ಕಾಲದಲ್ಲಿ "ಗಾಳಿಯಲ್ಲಿ ತೇಲಿ ಹೋಗಬಹುದಾದ ನಿರ್ಬಲ "ಸಾಹಿತ್ಯ"ವನ್ನು ರೈಗಳು ಬರೆಯದೆ, ಅನುಭವದ ಹಿನ್ನೆಲೆಯಲ್ಲಿ ಶಕ್ತಿಯನ್ನು ಗಳಿಸಿದ ಈ ಸಂಕಲನವನ್ನು–ವೀರನಾರಿ, ಆಯೇಷಾ ಕಳವಳದಲ್ಲಿ ಚಳವಳ" ಮೊದಲಾದ 14 ಕತೆಗಳಿಂದ ಕಲೆ ಹಾಕಿದ್ದಾರೆ.

ಅಂದಿನ ಜನಜೀವನದಲ್ಲಿ–ಸಾಹಿತ್ಯ ಪ್ರವೃತ್ತಿಯಲ್ಲಿ ಈ ಸಾಹಸ ಅದೊಂದು ಮೈಲಿಗಲ್ಲು.

**"ಲಕ್ಷ್ಮೀಶನ ಕತೆಗಳು."** ಇದು ಇನ್ನೊಂದು ಗದ್ಯ ಕೃತಿ. "ನಾದಲೋಲ ಲಕ್ಷ್ಮೀಶನ" ಜೈಮಿನಿಭಾರತದ ರಸ-- ರುಚಿಗಳು ಕೆಡದಂತೆ, ಸೌರಭವು ತುಂಬಿ ನಿಲುವಂತೆ, ಕಥಾ ಗತಿಯು ಕುಂಠಿತವಾಗದಂತೆ, ರಸಾಲಂಕಾರಗಳುವ್ಯೆವೆತ್ತು ಬರು

ವಂತೆ--ಸರಳವಾದ ಶೈಲಿಯಲ್ಲಿ ರೈಗಳು ಈ ಕೃತಿಯನ್ನು ಬ
ದಿದ್ದಾರೆ.

'ಜೈಮಿನಿ ಭಾರತ'ವನ್ನು ಓದಿದ ಯಾವನೇ ರಸಿಕನ
ಗದ್ಯರೂಪವಾಗಿ ಬೆಳಕುಕಂಡ ಈ "ಸುರಭಿ"ಯನ್ನು ಆಘ್ರಾಣ
ದಿರನು.

'ಜೈಮಿನಿ ಭಾರತ'ದಂತಹ, ಶಾಶ್ವತಕೃತಿಯನ್ನು, ಗ
ರೂಪದಲ್ಲಿ ಬರೆವುದು ಸುಲಭದ ಕೆಲಸವಲ್ಲ. ಮೂಲಗ್ರಂಥ
ಹಿಡಿತ, ರಸಾಲಂಕಾರಗಳ ಮೂಲಕ ಹರಿದೋಡುವ ಭಾ
ಪ್ರವಾಹದರ್ಶನ, ಅನ್ಯಾದೃಶ್ಯವಾದ ತಾಳ್ಮೆ, ಭಕ್ತಿ--ಗೌರವಗ
ದ್ದರೆ ಮಾತ್ರ ಈ ಬಗೆಯ ಗ್ರಂಥವನ್ನು ಬರೆಯಲು ಸಾಧ್ಯ.

"ವೈಗಳ್ಳನಾಗಿ ಕುಳಿತಿರಲಾರೆ. ನಿಮಿಷವೂ ಬಿಡುವಿಲ್ಲ
ಸಾಹಿತ್ಯದ ಆಹಾರ ನನಗೆ ಬೇಕು ಅದೇ ನನಗೆ ಸವಿಯುಣಿಸು
ಎಂದು ಉತ್ಸಾಹದಿಂದಾಡುವ ರೈಗಳು ಸಾಹಿತ್ಯದಲ್ಲಿ ಯಾವು
ಪಂಗಡವನ್ನು ಕಟ್ಟಿಕೊಳ್ಳದೆ, ಅದು ಪ್ರಾಚೀನವಿರಲಿ-ಆಧುನಿ
ವಿರಲಿ, ಜನತೆಯ ನಿತ್ಯಾರೋಗ್ಯವನ್ನು ಬಯಸಿ, ಕಾಲ
ತಕ್ಕ ಉಣಿಸನ್ನು ನೀಡುತ್ತಾರೆ; ತೃಪ್ತರಾಗುತ್ತಾರೆ.

ಅವರು ಬರೆದ ಗದ್ಯ ಕೃತಿಗಳೆಲ್ಲ ಮೇಲಿನ ಮಾತಿಗೆ ಅ
ಯೋಜ್ಯಗಳಿವೆಯೆಂಬುದೂ ಖಂಡಿತವೆ.

ಗದ್ಯದ ಮಾತಿನ ಕೊನೆಯ ಮೊದಲು—

ಕಯ್ಯಾರರು 'ವಿರಾಗಿಣಿ' ಎಂಬ ಕಿರುನಾಟಕವನ್ನು
ಬರೆದಿದ್ದಾರೆ. ಬಾಲಕಿಯರೇ ಅಭಿನಯಿಸಬಹುದಾದ, ಕಾಲೋ
ಚಿತವಾಗಿ (ಸ್ವಾತಂತ್ರ್ಯಶಕ್ತಿ) ಬರೆಯಲಾದ ನಾಟಕವಿದು
ಒಂದು ಕಾಲದ ಜೀವನದರ್ಶನವನ್ನು ನಾಟಕವಿದರಿಂದ ಹೊ
ಬಹುದು.

ಅಂತೂ ರೈಗಳವರ ಗದ್ಯ ಶೈಲಿಯಲ್ಲಿ ನಾವು ಉನ್ಮೇಷ ಭರಿತವಾದ ಭಾವಗತಿಯನ್ನು ಕಾಣಬಹುದು; ಜೀವನೋಪಾ ಯೋಗಿಯಾದ, ಸಂಸ್ಕೃತಿಯ ನೆಳಲಾದ ಸಾಹಿತ್ಯಶಕ್ತಿಯ ಓಟ ವನ್ನೂ ಲಕ್ಷಿಸಬಹುದು........

ಕಥಾ ವಸ್ತುವಿನ ಎತ್ತರ--ಬಿತ್ತರಗಳನ್ನು ನಿರಾಡಂಬರ ವಾದರೂ ಗೌರವಯುತವಾಗಿ ಆಳೆವ ರೈಗಳ ಗದ್ಯ ಶೈಲಿ ತನ್ನದೇ ಆದ ಭಂಗಿಯಲ್ಲಿ ಹೃದ್ಯವಾಗಿದೆ.

## ಭಾಗ ೫

**ಕಾವ್ಯಶ್ರೀಗೆ ಕುಂಕುಮ ಸ್ಥಾಪಕ:—**

“ನೀವು ಕಾವ್ಯ ಶ್ರೀ ಮುಖವನ್ನು ಜನತೆಗೆ ತೋರಿದಿರಿ. ನಿಮ್ಮ ಬರವಣಿಗೆಯಲ್ಲಿ ಪ್ರಸನ್ನತೆಯಿದೆ, ನಿರ್ಮಲತೆಯಿದೆ. ದೇಶ ಭಕ್ತಿಯ ಉನ್ನತಿಕೆ, ವ್ಯಕ್ತಿಯ ಉದಾತ್ತತೆ ಇವನ್ನು ಚಿತ್ರಿಸುವ ಭಾಷೆ ಮತ್ತು ನುಡಿಯುವ ಛಂದ ಎಷ್ಟು ಸರಳವೋ ಅಷ್ಟು ಭವ್ಯವಾಗಿದೆ ನೀವು ಹೊಸ ಹಾಡನ್ನು ನವಭಾವ-ನವ ಜೀವ-ನವಶಕ್ತಿ ತುಂಬಿಸುವಂತೆ ಹಾಡಿದಿರಿ. ಆ ಹಾಡು ಯುಗ ಯುಗಗಳಾಚೆಯಲಿ, ಲೋಕ ಲೋಕಾಂತದಲಿ, ಗುಡುಗ ಬೇಕೆಂದು ಎದೆಹಿಗ್ಗಿ ಹಾಡಿದಿರಿ. ನಿಮ್ಮ ಸ್ವಾತಂತ್ರ್ಯ ಸಂದೇಶ ಸಾಹಿತ್ಯ ಸಂತೋಷ ಎದೆಯನ್ನರಳಿಸಿದೆ, ಮನವ ಕೆರಳಿಸಿದೆ, ಆದು ವಿಶ್ವ ವಿಶಾಲತೆಯ ಸಂಬಂಧ ಸಾಧಿಸಲು ಸಾಧನವಾ ಗಿರುತ್ತದೆ.”

ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜಿನ ನೇತೃತ್ವದ
ರಾಷ್ಟ್ರಪಶಸ್ತಿ ವಿಜೇತ, ಕನ್ನಡ ಕವಿ
ಕಯ್ಯಾರ ಕಿಂಞಣ್ಣ ರೈ

ಅವರನ್ನು ಸನ್ಮಾನಿಸಿದಾಗ ಅಂದಿನ ಸನ್ಮಾನ ಪತ್ರ ಒಳ್ಳೆಯ ಮಾತುಗಳಿವು.

ಕವಿ ರೈಗಳು ಕಾವ್ಯ ಶ್ರೀಮುಖವನ್ನು ಬೆಳಗಲು ಸಿದ್ಧಗೊ ಸಿದ ಕಾವ್ಯಕುಂಕುಮದ ಹಿರಿತನವನ್ನು ಸಾರಲು ಇನ್ನು ಇ ಕ್ಕಿಂತ ಮಿಗಿಲಾದ ಮಾತುಗಳು ಬೇಕಿಲ್ಲ. ಶ್ರೀಮುಖ ಐ ಗಾನ ಮೊದಲಾದ ಕೃತಿಗಳು ಯಾವುದನ್ನು ಸಾಧಿಸಿವೆಯೋ ಸಾಧಿಸುತ್ತಿವೆಯೋ ಅವೆಲ್ಲದರ ಸಮಾಗ್ರತೆಯನ್ನು ಈ ಮಾತು ಳಲ್ಲಿ ಕಾಣಬಹುದು. ರೈಗಳ-ಸರಳ ಸುಂದರ ಸತ್ತ್ವಸಂಪನ್ನವಾದ ನಿರ್ಮಲ ಪ್ರಜ್ಞೆಯ ನೆಲೆವನೆಯಾದ ಪ್ರತಿಭೆಯು "ಜನಜೀವ ವನ್ನು ಎಚ್ಚರಿಸುವ ತೂರ್ಯಧನಿಸಾಹಿತ್ಯ" ಎಂದಾಡಿದ ಹಿರಿಯ ಕವಿಗಳೊಬ್ಬರ ನಿರ್ವಚನೆಯನ್ನು ಅಕ್ಷರಶಃ ಸಿಲುಕಿ ಉತ್ತಮ ಕೃತಿಗಳನ್ನು ಬೆಳಕು ಕಾಣಿಸಿದೆ.

ರೈಗಳು ಕಾಸರಗೋಡಿನ ಹೆಮ್ಮೆಯ ಕವಿ! ಅವರ ಸಮುನ್ನ ವ್ಯಕ್ತಿತ್ವ ಕಾಸರಗೋಡಿನ ಕನ್ನಡಿಗರ ನೋವು-ಸಂಕಟಗಳನ್ನು ನಾಡು-ಹೊರನಾಡುಗಳಲ್ಲಿ ಹೇಳಿ-ಕಾಸರಗೋಡಿನ ಕುರಿತು ಸಹಾನುಭೂತಿಯನ್ನು ಕನ್ನಡಿಗರಿಂದ ಪಡೆಯುವಷ್ಟು ಹಿ ದಾದುದು. ಅವರ ವಾಣಿಯಲ್ಲಿ-ಕಾವ್ಯ ಝರಿಯಲ್ಲಿ ಪ್ರಬ ವಾದ ಸೆಳೆತವಿದೆ!

**ಮೊದಲ ಸಂಕಲನ:— ಶ್ರೀ ಮುಖ!**

"ಶುಭದಿನ ಹೊಸಬೆಳಕಿನಾನಂದ ಶೋಭೆಯಲಿ
ನಿನ್ನ ಶ್ರೀಮುಖವೊಮ್ಮೆ ನೋಡಬೇಕು:—

ಎಂಬ ಬಯಕೆಯನ್ನು ಮುಂದಿರಿಸಿದ ರೈಗಳ 'ಶ್ರೀಮುಖ

ಸ್ವಾತಂತ್ರ್ಯಪೂರ್ವ ಸಾಹಿತ್ಯವಾಗಿ 1943ರಲ್ಲಿ ಪ್ರಕಟವಾಯಿತು. 25 ಕವನಗಳನ್ನು ಕೂಡಿಕೊಂಡ ಒಂದು ಸಂಕಲನವಿದು. "ಶ್ರೀಮುಖ" ಎಂಬ ಕವನ-ಸಂಕಲನದ ಮೊದಲ ಕವಿತೆಯೆಂದು ಮಾತ್ರವಲ್ಲ; ಅರ್ಥದ ದೃಷ್ಟಿಯಿಂದಲೂ ಅಗ್ರಸ್ಥಾನದಲ್ಲಿದೆ. ಆದುದರಿಂದಲೆ, ಈ ಕೃತಿಗೆ "ಶ್ರೀಮುಖ"ವೆಂಬ ನಾಮಕರಣವೂ ಆಯಿತು.

ದಶಕಗಳ ಹಿಂದೆ ನಿಂತರೆ . . . . .

ಭಾರತಾಂಬೆಯ ಸ್ವಾಗತದ ತೆರನಾದರೊ
"ಆರ್ಯರೋ ಮೊಗಲರೋ ಕ್ರೈಸ್ತರೋ ತಡೆಯೇನು ?
ಎಲ್ಲರೂ ಬರಲೆಂದು ಸ್ವಾಗತಿಸಿದೆ—"
ಭೇದವೆಣಿಸದೆ ತಾಯೆ-ನೀ ಸಲಹಿದೆ
ಪ್ರೇಮ ಸಂಗೀತದೊಳೆ ಮೆಯ್ಮರಸಿದೆ.
ಎಂದನ್ನುವಂತೆ-ಹಿರಿದಿದೆ

ಮಾತೆಯ ಘನತೆಯನ್ನು ರೂಪಿಸಿದ ಕವಿಗಳು

॥ ವಿಂಧ್ಯ ಹಿಮಗಿರಿಗಳುನ್ನತಿಯ ಮೀರಿತು ಮಾತೆ—
ನಿನ್ನ ಘನತೆಗೆ ಲೋಕ ಬೆರಗಾಯಿತು— ॥

ಎಂದೆಂದು, "ಅವಮಾನಗಳನಿಂತು ಶತಮಾನ ಸಹಿಸಿದಾ" ಎಂಬ ಮಾತೆಯ ಸಂಕಟದ ಮುಂದೆ ಒಮ್ಮೆ ಕೊರಗಿ— ಪುನಃ "ಶಕ್ತಿ ಪುತ್ರರು ನಾವು ಹರಸಿ ಬಿಡು! ತೆರಳುವೆವು ತಡೆವರುಂಟೆ?" ಎಂದು ಧೀರೋಕ್ತಿಯನ್ನಾಡುವ ಆ ಧಾಟಿ ಅತ್ಯಂತ ಸೊಗಸಾಗಿದೆ.

ಆ ಬಳಿಕ—ಹೊಸಜಗದ ನಿರ್ಮಾಣದ ಸಂಧಿಕಾಲದಲ್ಲಿ —ಭಾರತೀಯರ ನಿಲುಮೆಯನ್ನು ವ್ಯಕ್ತಪಡಿಸುತ್ತ, ಭಾರತ ಮಾತೆಯ ಶ್ರೀಮುಖ ವೈಭವವನ್ನು ಸಾರುವ ಈ ಪದ್ಯದ ಕೊನೆಯ ಸಾಲುಗಳು ಮಹೋನ್ನತವಾಗಿವೆ....

"ಹಸುರುಡುಗೆ ಪಸೆದುಟ್ಟು, ಸಿರಿಮುಡಿಗೆ ಹೂ ತೊಟ್ಟು
ಭುವನೇಶ್ವರಿಯೆ! ನೀನು ಮೆರೆಯಬೇಕು;
ಶುಭದಿನದ ಹೊಸ ಬೆಳಕಿನಾನಂದ ಶೋಭೆಯಲಿ
ನಿನ್ನ ಶ್ರೀಮುಖವೊಮ್ಮೆ ನೋಡಬೇಕು—"
ಎಂದು ಬಯಸಿದ್ದಾರೆ.

ಈ ಬಯಕೆ ಕವಿಗಳದ್ದು ಮಾತ್ರವಲ್ಲ; ಭಾರತದ್ದೂ ಆಗಿದೆ. ಆ ಮುಂದೆ "ವ್ಯರ್ಥ ಬಾಳದಿರೆಂದು ಆಡುತಿಹ" ಹಾಡುವ ಹಕ್ಕಿಯನ್ನು ಕಂಡು, ಬಹು ದೀರ್ಘವಾದ ಯಾತ್ರೆಯಲ್ಲಿ ಸೋತು ಹೋದ ಪಥಿಕನನ್ನು "ಬಾಳ-ಬೆಳಗಲು ಬಲಿತ ಆಳಾಗಿ ಬಾ ಮರಳಿ, ನಡೆ ದಾರಿಗಾ" ಎಂದು ಹುರಿದುಂಬಿಸುತ್ತಿರುವ 'ದಾರಿಗ'ನನ್ನು ಸಮೀಪಿಸಿ, ಅಲ್ಲಿಂದ ಮುಂದೆ ಕ್ರಮಿಸುತ್ತ "ನಾಳೆ ಸುಖವಿಲ್ಲೆಂದು ಇಂದು ಚಿಂತಿಸಬೇಡ.... ಕಾಣದಿಹ ದಾರಿಯಲಿ ಮುಂದಿರುವ ಕಷ್ಟಗಳ ಇಂದು ನೆನೆಯುತ ನೀನು ಮರುಗಲೇಕೆ?" ಎಂದು "ಏಕೆ" ಕವನ ನೀಡಿದ 'ಸಾಂತ್ವನ'ವನ್ನು ಕಿವಿಗೊಟ್ಟು—ಮನವಿರಿಸಿ ಕೇಳುತ್ತೇವೆ.

ಮುಂದಿನ 'ರಣನಾದ'ದಲ್ಲಿ "ರಕ್ಕಸರ ರಾಜ್ಯದಲಿ ದೇವನಿಲ್ಲುವುದುಂಟೆ? ........ಸತ್ಯಕ್ಕೆ ಜಯವೆಲ್ಲಿ? ಧರ್ಮಕ್ಕೆ ನೆಲೆಯೆಲ್ಲಿ" ಎಂಬ ಆವೇಶದ ಬಿರುಸು ತೋರಿದರೆ 'ಜಾಗೃತಿ'ಯಲ್ಲಿ ಕ್ರಾಂತಿಯ ಕಹಳೆಯನ್ನೂದಿದ ಕವಿಗಳ ಸಿಂಹ ಗರ್ಜನೆ ಕೇಳಿಸುತ್ತಿದೆ.

"ವಿಶ್ವ ಗರ್ಭದ ಗೋಳು" "ಉಪವಾಸ" ಈ ಕವಿತೆಗಳು ಕ್ರಮವಾಗಿ "ಸತ್ಯ ಧರ್ಮಗಳೆಲ್ಲಿ—ಯುಗಪುರುಷನಿರವೆಲ್ಲಿ — ಯಾರ್‌ಮಣ್ ಮುಕ್ಕುವರೊ ತಿಳಿಯದಿಹುದಿಂದು" ಎಂಬ ಗೋಳನ್ನೂ "ಮಿದು ಕರುಳು ಹೃದಯಗಳು ಕುದಿಯುತಿವೆ

ಬೆಂಕಿಯಲಿ—ಎದೆಯಿಲ್ಲವೇ ನಿಮಗೆ? ಬದುಕುವುತ್ತರ ಹೇಳಿ" ಎಂಬ ಸಮಸ್ಯೆಯನ್ನೂ ಮುಂದಿರಿಸುತ್ತಿವೆ.

"ಚಿನ್ನ ಕನಸು ಕಂಡೆನೊಂದು" ಎಂಬ ಹಾಡು "ಪೂರ್ವ ರಾಷ್ಟ್ರರಮಣಿಮುಖದಿ ಸೂರ್ಯಕಿರಣ ಕಾಂತಿಯಿತ್ತು" ಎಂಬ ಸತ್ಫಲವನ್ನು, "ಗಾಂಧೀದರ್ಶನ" ಮತ್ತು "ಗಾಂಧೀಜಿಗೆ" ಎಂಬ ಗೀತಗಳು "ಬಂಡೆಯೊಡೆದು ಹಾಲು ಸುರಿದು ಬರುವಷ್ಟು ಪಾವನ ವಾದ ಗಾಂಧೀ ಚರಣ ಸ್ಪರ್ಶವನ್ನು, ಗಾಂಧೀ ಜನ್ಮೋದಯದ ಮಂಗಲವನ್ನು ಹಾಡುತ್ತಿವೆ.

"ಪೋಗದೂರಿಗೆ ಬರೆಯದೊಂದು ಪತ್ರವನಿತ್ತು ಸಾಗಿಸುವ ಸಾಹಸದೊಳರ್ಥವಿಲ್ಲ" ಎಂಬುದಾಗಿ 'ಅವನೇ' ಕವನವನ್ನು ಕಟ್ಟಿದ ಕವಿಗಳು ಆಸ್ತಿಕ ನಾಸ್ತಿಕರ ಕೊನೆಮೊದಲಿಲ್ಲದ ವಾದ ವನ್ನು, ಕ್ಷುಲ್ಲಕವಾಗಿಸುವ ವಿಧಾನ ಬಹು ತೀಕ್ಷ್ಣವಿದೆ.

ಎಳವೆಯಲ್ಲಿ ತನ್ನನ್ನು ಆಕರ್ಷಿಸಿದ, ಉನ್ನತಿಕೆಯ ಪಾದಕ್ಕೆ ಓನಾಮವನ್ನು ಹಾಡಿದ 'ಪೊಸಡಿಗುಂಪೆ" ಎಂಬ ಕವನ ತಾಳ ಮೇಳಗಳು ಜತೆಗೊಂಡ ನರ್ತನದಂತೆ ಉಲ್ಲಾಸಮಯವಾಗಿದೆ. "ರಸಿಕರಿಗಿದೆ ರಸಾಯನ" ಎಂದಾಡಿದ ಕವಿಯ ಮಾತು ಪೂರ್ಣ ಸತ್ಯ. 'ತುಳುನಾಡಿತಿ' ಎಂಬ ಮತ್ತೊಂದು ಕವನ ತಾಯ್ನಾಡಿನ ಸವಿಯುಣಿಸನ್ನು ಮೊಗೆ-ಮೊಗೆದು ನೀಡುವಲ್ಲಿ ಸಂಪೂರ್ಣ ಕೃತಾರ್ಥವಾಗಿದೆ.

"ಭ್ರಮರ ಗೀತೆ"–ಇದು ಕವನಗಳ ರಾಜ! (ರಾಣಿಯಾದರೂ ತಪ್ಪಲ್ಲ)

'ಇನಿತು ಸುಮಗಳರಳುತಿಹವು--ಆರಿಗಾಗಿಯೊ"? ಎಂಬ ಪ್ರಶ್ನೆಯನ್ನು ಮುಂದಿರಿಸಿದ ಕವಿಗಳು "ಯೌವನ"ದ ಕಾವನ್ನು ಮಾರ್ಮಿಕವಾಗಿ ಸಾರುತ್ತ, ಮಾನಸಿಕವಾದ--ಮಾದಕ ವಿಪ್ಲವ ವನ್ನು ವಿಶ್ಲೇಷಿಸಿ ತೋರುತ್ತ,

"ಒಂದೆ ಸುಮವು ನಿನ್ನದಿಹುದು ಆದರೆ ಆಯ್ದುಕೊ"-- ಎಂಬ ಧಾರ್ಮಿಕ ಸಂದೇಶವನ್ನೊರೆದು, "ಬಂದ ಭಾಗ್ಯ ಸವಿದು ನೋಡು ತೃಪ್ತಿಗೆಯ್ದುಕೊ" ಎಂಬ ಸಾಂತ್ವನವನ್ನು ನೀಡಿ, "ಮಿಕ್ಕ ಸುಮವ ಮುಟ್ಟಿ ನೀನು ಕೆಟ್ಟೆ ನೋಡಿಕೊ" ಎಂಬ ಎಚ್ಚರವನ್ನು ಕೊಟ್ಟಿದ್ದಾರೆ. ಸರ್ವಾಂಗ ಸುಂದರವಾದ ಭಾವನಾ ನಿಧಿಯಿದು.

'ಊರ್ಮಿಳಾ' "ಬೇಡುವೆಂ ಚಂದ್ರವಂಶದ ಕುಡಿಯ ಕಾಪಾಡು" ಎಂಬೆರಡು ನೀಳ್ಗವನಗಳು, ರೈಗಳ ನೂತನ ಪ್ರಯೋಗ; ನವನೂತನ ಛಂದದಿಂದ ಮುನ್ನಡೆಸಿದ ಗೀತಗಳು.

ಎತ್ತರದ ದನಿಯಲ್ಲಿ-ಆವೇಶ ಪೂರ್ಣರಾಗಿ ರೈಗಳವನ್ನು ಹಾಡಬೇಕು; ರಸಿಕರದನ್ನು ಕೇಳಬೇಕು ! ಈ ಮಧ್ಯದಲ್ಲಿ ಮೊರೆ ದಾಡುವ ಭಾವಲಹರಿಗಳು ಅನುಭವ ಸಂವೇದ್ಯಗಳು. ಒಂದರಲ್ಲಿ ಆದಿಕವಿ ಗುರುತಿಸದ ಊರ್ಮಿಳೆಯ ದುಃಖದ ಮಿಡಿತ, ಇನ್ನೊಂದರಲ್ಲಿ ಕರ್ಣನ ವ್ಯಕ್ತಿತ್ವದ ಹಿರಿತನದ ಪರಿಚಯು--ಕೂಡಿ ನಿಂತಿದೆ. ನೀಳ್ಗವನಗಳಿವುಗಳಲ್ಲಿ ಕವಿಗಳು ಆಯ್ದುಕೊಂಡ ಕಥಾ ಭಾಗ, ಪಾತ್ರಪೋಷಣೆಗಾಗಿರುವ ಹಿನ್ನೆಲೆಯ ಸಂನಿವೇಶ ಆದರಣೀಯ ವಿವೆ. ಈ ಕವನಗಳಲ್ಲಿ ಎಡೆಯಾಡುತ್ತಿರುವ, ಹೃದಯಸ್ಪಂದನ ಗಳಂತಿರುವ ಸಾಲುಗಳು ನಿರಾಡಂಬರದ ಸಹಜ ಸುಂದರ ಶೈಲಿ ಯಲ್ಲಿ ತೇಲಾಡುತ್ತಿವೆ.

ಈ ಸಂಕಲನದಲ್ಲಿರುವ ಇನ್ನೊಂದು ಕವನ 'ಸ್ವಗತ' ರೈಗಳ ಆತ್ಮವೃತ್ತವಿದು ತನ್ನ ಜೀವನದ ವಿವಿಧ ಹಂತಗಳನ್ನು ತಿಳಿಯಾಗಿ-ಮುಚ್ಚುಮರೆಯಿಲ್ಲದೆ ಸಾರಿದ್ದಾರೆ. ಈ ಕವನವು ಈ ಸಂಕಲನದಲ್ಲಿ ಹೇಗೆ ಎಡೆ ಹೊಂದಿತೋ ಗೊತ್ತಾಗದು. ಬಹುಶಃ "ಮುಂದೊಮ್ಮೆ ಆತ್ಮ ಗೀತದ ಹಿಗ್ಗಿ ಹಾಡಲುಂಟು-

ಎದೆ ಹಿಗ್ಗಿ ನಾಂ ಹಾಡಲುಂಟು” ಎಂಬುದಾಗಿ ಇದೇ ಕವನದ ಕೊನೆಯಲ್ಲಿ ಬಂದ ಮಾತನ್ನು-ಭವಿಷ್ಯದ ನಾಂದಿಯಾಗಿ ಹಾಡುವ ಮನೋಧರ್ಮವೋ ಏನೊ! ಕೇಳಲು ಇಂಪಾಗಿದೆ ಈ ಕವನ-ರಮ್ಯಜೀವನದ ಕಥನ.

ಇನ್ನುಳಿದ ಒಂದೆರಡು ಗೀತಗಳೂ ಚೆನ್ನಾಗಿವೆ.

ಕೃತಿಯ ಮಂಗಲ ಕಲಶವಾಗಿ ಇರಿಸಿದ “ಹೊಸಹಾಡು”- “ನವಭಾರ ನವಜೀವ-ನವಶಕ್ತಿ ತುಂಬಿಸುವ ಹಾಡೊಮ್ಮೆ ಹಾಡಬೇಕು- ಆ ಹಾಡುಗುಡುಗಬೇಕು-ನಾದನಿಗಳೇಳಬೇಕು”ಎಂಬ ಆಶೋತ್ತರದಲ್ಲಿ ಸೇರಿಕೊಂಡು “ಇದೊ ಮೊದಲು, ಮುನ್ನಿಲ್ಲ-ಮುಗಿದುದಂದಿನ ಪಾಡು, ಹೊಸತಿಂದು ಹೊಸತು ಹಾಡು” ಎಂಬಲ್ಲಿಗೆ ಶಾಂತಿ ಮಂತ್ರವನ್ನು ಹಾಡುತ್ತಿದೆ.
ಐಕ್ಯಗಾನದ ದನಿ!

ಭಾರತವು ಸ್ವಾತಂತ್ರ್ಯವನ್ನು ಪಡೆದ ಎರಡು ವರ್ಷಗಳ ಬಳಿಕ ಐಕ್ಯಗಾನವು ಪ್ರಕಟವಾಯಿತು. ಸ್ವಾತಂತ್ರ್ಯಕ್ಕೆ ಮೊದಲು, ಆ ಬಳಿಕ ಬರೆದ ಕವನಗಳು ಇಲ್ಲಿ ಸೇರಿವೆ. ಐಕ್ಯಗಾನದಲ್ಲಿ ಒಟ್ಟು ಹನ್ನೆರಡು ಗೀತಗಳಿವೆ.

‘ಐಕ್ಯಗಾನ’ ಎಂದು ನಾಂದಿ ಹಾಡಿದ ಈ ಕೃತಿ ‘ರಕ್ತಮಸಿ’ಯಲ್ಲಿ ತೆರೆಯಿಳಿಸುತ್ತಿದೆ.

“ತಾಯ್ನಾಡಿನ ಬಿಡುಗಡೆಯ ಹೋರಾಟಗಳಲ್ಲಿ ಜನತೆ ಮಾಡಿದ ಬಲಿದಾನಗಳು, ಬಿಡುಗಡೆಯ ಬೆಲೆಗಳು, ಸ್ವಾತಂತ್ರ್ಯದ ಸಂಕಷ್ಟ-ಸಂತೋಷಗಳು” ಇಲ್ಲಿನ ಕವನಗಳಿಗೆ ಪ್ರೇರಕಗಳು”-ಎಂದಿದ್ದಾರೆ ರೈಗಳು!

“ಐಕ್ಯವೊಂದೇ ಮಂತ್ರ—ಐಕ್ಯದಿಂದೆ ಸ್ವತಂತ್ರ
ಐಕ್ಯಗಾನದಿ ರಾಷ್ಟ್ರ ತೇಲುತಿರಲಿ!

ರಾಷ್ಟ್ರವೊಂದೇ ಜೀವ ಎಂದು ಸಾರಿರಿ ಯಾವ ರಕ್ಕಸರು
ಇದಿರಿಲ್ಲ"
ಪಕ್ಷವೇ-ಪಂಥವೇ ಜಾತಿಯೇ ನೀತಿಯೇ
ಮೌಢ್ಯ ಮುರಿಯುವ ಬನ್ನಿ-ಎಲ್ಲರೊಂದೇ . . . .
ಐಕ್ಯದಮೃತದ ರಸಕೆ ಜೀವ ಜೀವದ ಬೆಸುಗೆ
ಕೂಡಿ ಬರೆ ಭೀಮಬಲ ನಮ್ಮೊಳುಂಟು!"

ಎಂದು ಎದೆ ಹಿಗ್ಗಿ ಹಾಡಿ, ನುಡಿದಂತೆ ನಡೆದು ಸಾಗಿದ ಕವಿಗಳಿವರು–ಉಪದೇಶಕನಾಗಿ ಸಾಗದೆ "ಸೋದರತೆ ಮಾನವತೆ--ಸತ್ಯ ಶಾಂತತೆ ಸಮತೆ ಅಸ್ತಿವಾರದಿ ಜನತೆ ಕಟ್ಟಿ ಬಿಡಿರಿ"ಎಂದು ಘೋಷಿಸುತ್ತಾರೆ. ಗೀತವಿದರ ಮಧ್ಯದಲ್ಲಿ ಬೇಗುವ 'ವಂದೇ ಮಾತರಂ' ರೂಪವು ಸರ್ವೋದ್ಧಾರವಾಗಿದೆ.

ಈ ಸಂಕಲನದ ವೈಶಿಷ್ಟ್ಯವನ್ನು ಎತ್ತಿತೋರುವ 'ದಿಗಂತ ದಾಚೆಗೆ" ಎಂಬ ಕವನವು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ 'ನೇತಾಜಿ'ಗಳ ರೋಮಾಂಚಕ ಘಟನೆಗಳನ್ನು ವಿಸ್ತರಿಸಿದರೆ, 'ನೌಶೇರ ಶೂರ' ಎಂಬ ಗೀತವು ಕಾಶ್ಮೀರದ ಹೋರಾಟದಲ್ಲಿ ದಳಪತಿ ಉಸ್ಮಾನ್ ಮಾಡಿದ ಬಲಿದಾನದ ವೀರೇತಿಹಾಸವನ್ನು ಮೊಳಗುತ್ತಿದೆ.

ರಾಷ್ಟ್ರೀಯತೆಯ ಉನ್ಮೇಷ। ವಿಪ್ಲವದ ಉನ್ಮಾದ,
ಸ್ವಾತಂತ್ರ್ಯದಾಹ, ತಾಯ್ನಾಡ ಗೌರವ -- ಇವೆಲ್ಲವು
ವಿಜೃಂಭಿಸುವ ರಸ ಝರಿಗಳನ್ನು ಹಿಡಿದು ನಿಲ್ಲಿಸಿದ ಭಾರ
ಪ್ರವಾಹಗಳಿವು.

"ಸ್ವಾತಂತ್ರ್ಯ" ಪದದ ಮುಂದೆ ತಲೆ ಭಾಗಿ 'ಬಾಂಬು ಹೂಮಳೆ ಯೆಂದು, ಗುಂಡು ಭಾಜನೆಯೆಂದು, ಜೆಂಕಿಯಾರತಿಯೆಂದು ಮರಣ ಮಂಗಲವೆಂದು" ಬಗೆದ ಕವಿಗಳೀರ್ವರ ಹೃದಯವನ್ನು

ಮಾರ್ಮಿಕವಾಗಿ ಚಿತ್ರಿಸಿದ ವೀರಗೀತಗಳಿವು !

ಐಕ್ಯಗಾನದಲಿ ಕಾಣಿಸಿದ ಮಿಕ್ಕುಳಿದ ಗೀತಗಳು 'ಸ್ವಾತಂತ್ರ್ಯ ಕಹಳೆ"ಯ ಒಂದೊಂದು ರೂಪವನ್ನು ಬಲಿದು, ಕವಿಯ ಸ್ವಾತಂತ್ರ್ಯ ಪ್ರೇಮದ ತಿರುಳನ್ನು ಪದರು--ಪದರಾಗಿ ತೋರುವಲ್ಲಿ ಶಕ್ತವಾಗಿವೆಯೆಂಬಂತೆ "ಎನ್ನ ಜಾತಿ ಮನುಷ್ಯ ಜಾತಿ" ಎಂಬ ಕವನವು "ಒಕ್ಕಟ್ಟಿನಲ್ಲಿ ಬಾಳುವುದೆ ಬೇಕೆನಗೆ" ಎಂಬ ನಿಶ್ಚಲತೆಯನ್ನು ಅರುಹಿದರೆ, "ಬಿಡುಗಡೆಯು ಬಂತು" ಎಂಬ ಸಾಲುಗಳು ಸ್ವಾತಂತ್ರ್ಯೋದಯದಲ್ಲಿ ಸವಿದ ರಸಗಂಗೆಯ ಜೀವನವನ್ನು ತುಂಬಿ ನಿಲಿಸಿವೆ.

ಕೊನೆಯಲ್ಲಿ ಕಾಣಿಸುವ 'ರಕ್ತಮಸಿ' ಎಂಬ ಕವನವು ಆಗಸ್ಟ್ ಕ್ರಾಂತಿಯ ಒಂದನೆಯ ವರ್ಧಂತಿಯಂದು ಬರೆಯಲ್ಪಟ್ಟಿದೆ. "ಸ್ವಾರ್ಥ ವಿಷಮಯ ಸರ್ಪ ಜಾತಿ ಹೆಡೆಯನ್ನೆತ್ತಿ, ಬಿಚ್ಚಿ ಬುಸುಗುಟ್ಟುತಿದೆ -- ಕಚ್ಚುತಿದೆ ನೋಡ -- ಅವಕೆ ಬಲಿ ಬೀಳ ಬೇಡ" ಎಂದು ಗೆಳೆಯನಿಗೆ ಎಚ್ಚರವಿತ್ತ ಕವಿಗಳು, ಕ್ರಾಂತಿಯ ಕಿಡಿಯಾಗಿ.

"ಬಡತಾಯಿ ಮಕ್ಕಳನು -- ಬಲಿಕೊಡುವ ಮೂರ್ಖರನು
ಇರಿವ ಲೇಖನಿ ಬೇಕು – ರಕ್ತವದಕೆ ಮಸಿ !
ಸುಲಿಗೆ ಸಂಸ್ಕೃತಿಯೆಂದು, ತಿಳಿದಿರುವ ಪಾಪಿಗಳ
ಮುರಿವ ಲೇಖನಿ ಬೇಕು–ರಕ್ತವದಕೆ ಮಸಿ !

ಎಂದನ್ನುತ್ತ ಕೊನೆಯಲ್ಲಿ "ಎಮ್ಮೊಂದಿಗರ ಬದುಕ ಬಾಳಾಗಿ
ಬೆಳಗಿಸಲು ಬಲಿತ ಲೇಖನಿ ಬೇಕು -- ರಕ್ತವದಕೆ ಮಸಿ !"

ಎಂಬ ಶುಭಕಾಮನೆಯ ಉದಾತ್ತತೆಯನ್ನು ಬಯಸಿ ಸ್ಫೂರ್ತಿ, ಶಕ್ತಿ, ಕೀರ್ತಿಗಳ ಹೆಚ್ಚಳದ ದಾರಿಯನ್ನು ವೀಕ್ಷಿಸುತ್ತಾರೆ. !

**ಪುನರ್ನವದ ಸಂಕೇತ—**

ಸ್ವಾತಂತ್ರ್ಯ ಯುಗದ ಮೊದಲ ಮತ್ತು ಬಳಿಕಿನ ದಿನಗಳ ರಾಷ್ಟ್ರಜೀವನವನ್ನು ಶ್ರೀಮುಖ--ಐಕ್ಯಗಾನಗಳು ರೂಪಿಸಿದ ಬಳಿಕ, ಸುಮಾರು ಹತ್ತು ವರ್ಷಗಳ ವರೆಗೆ ಯಾವುದೇ ಕೃತಿ ಬರಲಿಲ್ಲ. ಇದಕ್ಕೆ ಕಾರಣವನ್ನು ರೈಗಳೇ ಹೇಳುತ್ತಾರೆ—

"ನನ್ನ ಬಾಳುವೆಯಲ್ಲಿ ಮತ್ತು ನಾನು ಬಾಳಿಬಂದ ನೆಲದಲ್ಲಿ ಉಂಟಾದ ಕೆಲವೊಂದು ಆಘಾತಗಳ ದೆಸೆಯಿಂದ ಈ ವಿಳಂಬ ಅನಿವಾರ್ಯವೇ ಆಯಿತು" ಎಂದು........

"ಕ್ಲೇಶ: ಫಲೇನ ಹಿ ಪುನರ್ನವತಾಂ ವಿಧತ್ತೇ"
"ಸಫಲ: ಕ್ಲೇಶಃ ನ ಕ್ಲೇಶ:"
ಕಾಲಿದಾಸೋಕ್ತಿಯಿದು. 'ಪುನರ್ನವದ' ಶ್ರೀಮುಖವು
ಇಲ್ಲಿ ಕಾಣಿಸಿದೆ.

"ಮಾತೆ ಭಾರತಿ, ನಿನ್ನ ಪುಣ್ಯಗರ್ಭದೊಳೆನಗೆ
ಮಂಗಳಾಶ್ರಯವಿತ್ತು–ಸೊಗದ ಸೊದೆಯೆರೆದೆ
ಎಲ್ಲ ದೇವರ ಹರಕೆ ಇಳಿದು ಬಂದಿತು ಶಿರಕೆ
ತಾಯ್ನೆಲದ ಹೊಸ ಬೆಳಕ ಕಂಡ ದಿನಕೆ........

ಜೀವನಧನ್ಯತೆಯನ್ನು ಹಾಡುವುದರೊಂದಿಗೆ ಕವಿವಾಣಿ 'ಪುನರ್ನವ'ದ ಸೌಭಾಗ್ಯವನ್ನು ಕೇಳಿಸಿತು ಪುನರ್ನವದ ಜೀವಾಳವಿಲ್ಲಿದೆ.

ಕವಿ ಹೃದಯ ಯೋಗ ಸಂಪನ್ನವಾಯಿತು
"ನಾನು ಮಣ್ಣಿನ ಮಗನು--ಮಂದಾರಮಾಲೆಯೆನೆ
ನೊಗನೇಗಿಲಂ ಹೊತ್ತು ತಿರುಗುವವನು......
ಹುಟ್ಟೂರ ದೂಳು ಹುಡಿಯೊಳು ಬೆರೆವೆನು.......
ತಾಯ್ನೆಲದ ಕೆಸರನೀರ್ ಮಂದಾಕಿನೀ ತೀರ್ಥ

ಹುಲ್ಲೆ ರೋಮಾಂಚ-ಬದುಕೆಲ್ಲ ಬಂಗಾರಂ"

ನೇಗಿಲಿನ ಹಿಡಿತದಲ್ಲಿ ದುಡಿತದ ಬಲವನ್ನು ಕಂಡು ಕವಿ ಹಿಗ್ಗುವ- "ಪುನರ್ನವ"ದ ಈ ಸಂಕಲನದಲ್ಲಿ ಒಟ್ಟು ಇಪ್ಪತ್ತೆರಡು ಗೀತಗಳಿವೆ. ಸಮರ್ಪಣಾ ಭಾವವನ್ನು ಮುಂದಿರಿಸಿ ಸಾಗುವ ಈ ಕವನಗಳಲ್ಲಿ, ಕೆಲವೆಡೆ 'ಆವರ್ತನ'ವು ತೋರಿಬರುವುದಾದರೂ, ಹತ್ತು ವರ್ಷಗಳ ಮುಂದಿನ ದಿನಗಳಲ್ಲಿ--ಕವಿ ತನ್ನ ಗತಜೀವನ ದಲ್ಲಿನ ಮೈಲಿಗಲ್ಲುಗಳನ್ನು ಗುರುತಿಸುವಾಗ--ಹಾಗಾಗುವುದ ರಲ್ಲಿ ವಿಶೇಷವೇನಿಲ್ಲ.

"ಬಾಳುವೆಯ ಬಟ್ಟಲಲಿ ನಂಜೆರೆದು ಕುಡಿಯೆನಲು
ಕಹಿಯೆನದೆ ಕುಡಿ-ಕುಡಿದೆ ಬದುಕಬಲ್ಲೆ........"

ಎಂದು ದನಿಗೇಳಿಸಿದ 'ಬದುಕು' ಕವಿತೆಯು, "ಕಷ್ಟ ಕಂಟಕದ ಬಾಳದಾರಿಯಲಿ ಧೈರ್ಯದಂಡ ಹಿಡಿ" ಎಂಬ 'ಹಣತೆ ಹಚ್ಚು' ಕವನದಿಂದ ಬಲಿತು ನಿಂತು, "ದುಡಿತವೆ ನಮ್ಮ ದೇವರು" ಎಂಬ ಜೀವನಾದರ್ಶವಲ್ಲಿ ಬಣ್ಣವೇರುತ್ತಿದೆ. ಈ ಆದರ್ಶವನ್ನು ರೇಖಿ ಸಿದ 'ನಮ್ಮ ದೇವರು' ಕವನ ಬಹು ಚೆನ್ನಾಗಿದೆ.

"ತಾಯ್ನಾಡ ನೆಲದಲ್ಲಿ ಹಿಡಿಮಣ್ಣು ಹುಡಿಯಲ್ಲಿ
ಬೆರೆವ ಭಾಗ್ಯವ ಸಾಕು--ಸಾಯುಜ್ಯದಲ್ಲಿ........
ನಿನ್ನ ಗೈಮೆಯ ಮೈಮೆಯಿಂದಲೇ ಬದುಕಿಹೆನು........"

"ಹರಕೆ"—"ನಮಸ್ತೆ" ಕವನಗಳೆಡೆಯಲ್ಲಿ ಓದುಗನನ್ನು ಕಣ್ದೆರೆ ಯಿಸಿ ನಿಲ್ಲಿಸುವ ಸಾರ್ಥಕ—ಸಾಲುಗಳಿವು, ಹೊಗಳಿ ದಣಿಯದ ಕವಿಯ ದೇಶಪ್ರೇಮವನ್ನು ಜೀವನಾದರ್ಶವನ್ನು ಪ್ರಕಟಿಸುತ್ತಿವೆ.

"ಇದೆ ಮೋಕ್ಷ ಸಾಧನವು-ಬಿಡುಗಡೆಯು ವೈಕುಂಠ
ಗೋವೆ ಕರೆಯುತಲಿಹುದು-ಕ್ರಾಂತಿವೀರ!......."

ರೈಗಳು ಗೋವೆಗೆ ದೊರಕದ ಸ್ವಾತಂತ್ರ್ಯದ ಬಗ್ಗೆ ಕೊರಗಿ

ದರು; ಕೊರಗಿ ಸುಮ್ಮನಿರಲಿಲ್ಲ. ಕ್ರಾಂತಿಯ ಕಿಡಿಯಾದರು. "ಗೋವೆ ನೋವ್ ಮಾಸಿಲ್ಲ" "ಗೋವೆಯ ಕರೆ" ಈ ಕವನಗಳಲ್ಲಿ ಮೈಗೂಡಿ ಬಂದ "ಕರೆ" ನಿರರ್ಥಕವಾಗಲಿಲ್ಲ. ಕವಿವಾಣಿ ಸತ್ಯವಾಯಿತು.

ಈ ಕವನಗಳು ಬೆಳಕುಕಂಡ ಅಲ್ಪಾವಧಿಯಲ್ಲಿ 'ಗೋವೆ ಸ್ವತಂತ್ರ'ವಾದುದೂ ಗಮನೀಯ. "ಬಿಡುಗಡೆಯೆ ವೈಕುಂಠ" ಎಂದಾಡಿದ ರೈಗಳ ಹೃದಯ ಸ್ಪಂದನವನ್ನಂದಾಲಿಸಬೇಕು. ಸ್ವಾತಂತ್ರ್ಯ ಸಂತೋಷ—ಎಂಬ ಮಾತೇ ಸದಾ ಜಪಮಂತ್ರವಾಗಿರುವ ರೈಗಳ ಲೇಖನಿಯ ತೀವ್ರತೆಗೆ ಸಾಕ್ಷಿಗಳಾಗಿವೆ ಈ ಕವನಗಳೆರಡು.

"ಬೆವರೆ ಗಂಗಾಸ್ನಾನ-ಹಸಿವೆ ಬಿಸಿಪರಮಾನ್ನ
ಎವ್ಮೊಡಲ ಮೂಳೆ ನೆತ್ತರೆ ತಿಂಡಿ ತೀರ್ಥಗಳು"
ಕಣ್ಣೀರ ಕಡಲ ತೆರೆಯಾಳದೊಳೆ ಕೈ ತೊಳೆದು ನಾವ್ ಬದುಕಿ
ಹಾಡುವೆವು ॥

ಎಂದು ಮೊಳಗುವ ಈ ನುಡಿಗಳು, ವಿಷಮತಾ ವಿದ್ವೇಷಿಯಾ ಕವಿವಾಣಿಯು ಬೇಗುದಿಯನ್ನು "ನಾವ್ ಬದುಕಿ ಹಾಡುವೆವು" ಈ ಕವಿತೆಯಿಂದ ತೋರಿದರೆ, "ನಾವು ಗೆಲ್ಲುವೆವು" ಎಂಬ ಕವನ "ಬಲಿತು ಬಾಳಿದ ಹಿರಿಯರ ರೋಮಾಂಚಕ ವೃತ್ತವನ್ನು ಕೇಳಿಸುವುದು."

ಮದಿಸಿದ ರಾಷ್ಟ್ರ ನಟನ ಸ್ವಚ್ಛಂದ ನಟನೆಗೆ ಮುರಿದೆದ್ದ ಕವಿಯ ಮುನಿಸನ್ನು "ರಾಷ್ಟ್ರನಟ" ತಾಳಿದರೆ, "ಹಿರೋಶಿಮಾ-ನಾಗಸಾಕಿ-ಶಾಂತಿಪೂಜೆ ಮುಗಿಯಿತು. ನಿನ್ನೆ ಜಾಪಾನ್-ನಾಳೆ ಚೀನ-ಮತ್ತೆ ತುಫಾನ್-ಭಾರತವನು ಬಿಡುವರೇನು... ತಡೆಯಬೇಕು ಹುಚ್ಚರ. ಎಂಬ ಎಚ್ಚರಿಕೆಯನ್ನು ನೀಡಿ "ಆಟ

ಮಾಟ'ವು ಶಾಂತಿ ಮಂದಿರದ ಬಳಿ ಸೇರುವ ಸಂದೇಶವನ್ನೊಯ್ಯು ತ್ತದೆ.

"ಕಳೆದ ಕಾಲವ ನೆನೆದು ಕಳವಳಿಸಿ ಫಲವಿಲ್ಲ...ಸುದಿನ ಸೂರ್ಯೋದಯವ ಕಾಂಬ ನಂಬುಗೆ" ಎಂಬ ಸುದಿನ ನಿರೀಕ್ಷೆ ಯನ್ನು 'ಬೆಳ್ಳಿ ಹಾಡು'; "ಕನ್ನಡಂ ಕನ್ನಡಂ ಕನ್ನಡ ಧ್ಯಾನಂ" ಎಂಬ ಅಭಿಮಾನವನ್ನು 'ನಾಡ ಹಬ್ಬದ ಹಾಡು'; ಕಾಯಕ ವನ್ನು ನಿರಹಂಕಾರ-ನಿಃಸ್ವಾರ್ಥ ಗತಿಯಲ್ಲಿ ಪೂರೈಸುವ ವಿಧಾನ ವನ್ನು 'ಕೆಸರ ಚೆಲ್ಲುವ ಕೆಲರ ನಡುವೆ; ಸ್ವಾತಂತ್ರ್ಯ-ಸಮತೆ- ಸ್ನೇಹ-ಸತ್ಯ ಇವುಗಳಿಂದ ಉಲ್ಲಸಿತವಾದ, ಜೀವನ ದೌರ್ಬಲ್ಯ ದಿಂದ ಮುಕ್ತವಾದ-ಬಾಳಿನ ಹೊಂಗನಸನ್ನು, ಈ ಕನಸು"-ಕವನ ಗಳು ಬಿಂಬಿಸುತ್ತಿವೆ.

ಕಠೋಪನಿಷತ್ತಿನಿಂದ ಆಯ್ದ "ಚಿರಪ್ರಶ್ನೆ"ಯ ಗಂಭೀರವು ಚಿತ್ರಣ, ಋಗ್ವೇದದಿಂದ ಆದರಿಸಿದ 'ಮರುದ್ಭಿರಗ್ನೆ ಆಗಹಿ'ಯ ಚೈತನ್ಯ ಸ್ವರೂಪಿಯಾದ ಅಗ್ನಿದೇವನ ಸನ್ನಿಧಾನ— ಇವು ಕನ್ನಡ ಸಾರಸ್ವತ ಲೋಕಕ್ಕೆ ರೈಗಳ ಅನರ್ಘಗಳಾದ ಕೊಡುಗೆಗಳು. ಶ್ರದ್ಧಾನ್ವಿತನಾದ ನಚಿಕೇತನ ದಿವ್ಯ-ಭವ್ಯ ಸ್ವರೂಪವನ್ನು ತಿಳಿ ಯಾಗಿ ಸಾರಿದ 'ಚಿರಪ್ರಶ್ನೆ' ಅದೊಂದು ಶಾಶ್ವತ ಸಾಹಿತ್ಯ; ಅಲ್ಲಿರುವ ಪದಗಳಲ್ಲಿ ಒಂದೂ ನಿರರ್ಥಕವಿಲ್ಲ.

ಆಧ್ಯಾತ್ಮಿಕ ಚಿಂತನೆಯತ್ತ, ತನ್ನನ್ನು ಸಾಗಗೊಟ್ಟು "ಮೃತ್ಯೋರ್ಮಾ ಅಮೃತಂ ಗಮಯ" ಎಂಬ ಅಮೃತವಾಣಿಯ ಸವಿಯನ್ನುಣ್ಣಿಸುವ ಕವಿಹೃದಯದ ಸಾಹಸ ಸರ್ವಾತ್ಮನಾ ಪ್ರಶಂಸನೀಯ.

"ಹೇ ವಿಶ್ವಕವಿ! ನಿನ್ನ ಕೃತಿಯಲಂಕೃತಿ ಪೂರ್ಣ" ಎಂದು 'ಕವಿಕೃತಿಯು' ದೀಪಾರಾಧನೆಯಾಗಿ, "ಕವಿಗುರುವಾದ ಠಾಗೊ

ರನ್ನು" 'ಮಣಿವೆ' ಕವನದಲ್ಲಿ ವಂದಿಸುತ್ತ ಪುನರ್ನವವು"— ತನು ನಶ್ವರ-ಮನ ಸುಸ್ಥಿರ--ಚಿಂತನ ಶಾಶ್ವತವು.

'ಭವ ಬಂಧನದ ವಿಮೋಚನ--ಇದೆ ಚೇತನ ಚಿಂತನ'— ಎಂದು ಚಿಂತನದ ವಿಶ್ವಾತ್ಮತೆಯನ್ನು ವಿಶದೀಕರಿಸಿ

"ಭಾವೈಕ್ಯದಿ ಜೀವೈಕ್ಯದಿ ಮಂಗಳ ಮಸಗಿರಲಿ"

ಎಂಬ ಮಂಗಲ ಧ್ವನಿಯೊಂದಿಗೆ ಮುಕ್ತಾಯವಾಗುವುದು!

"ಬೆಂಕಿ ಬಿದ್ದಿದೆ ಮನೆಗೆ" ಎಂಬ ಕವನವು ಪುನರ್ನವದಲ್ಲಿ ಸೇರಿದೆ ನಿಜ. ಆದರೆ ನನ್ನೆಣಿಕೆಯಂತೆ, ಅದು ಇಪ್ಪತ್ತೆರಡರಲ್ಲಿ ಸೇರಿಸಲ್ಪಡಬಾರದು. ವೈಯಕ್ತಿಕವಾಗಿ ಅದಕ್ಕಿರುವ ಸ್ಥಾನ ಕಿರಿದಲ್ಲ. 1956 ನವಂಬರ ಒಂದರಂದು ಕನ್ನಡದ ಅವಿಭಾಜ್ಯ ಅಂಗವಾದ ಕಾಸರಗೋಡು ಅನ್ಯಾಯವಾಗಿ ಕೇರಳದ ಮುಷಿ ಯಲ್ಲಿ ಸೆರೆಗೊಂಡಾಗ,

"ಸಿಂಹ-ಸ್ವಪ್ನವ ಬಿಟ್ಟು ಕೆರಳಿ ನಿಲಲಿ" ಎಂದು ಗರ್ಜಿನೆ

ಕಾಸರಗೋಡಿನ ಕನ್ನಡದ ನೆಲದಲ್ಲಿ ಪುಳಕವೆಬ್ಬಿಸಿದ ಕ್ರಾಂತಿಗೀತವದು. ಅದಕ್ಕೆ ತನ್ನದೇ ಆದ ಒಂದು ಸ್ಥಾನವಿದೆ. ಆದುದರಿಂದ ಅದುವೆ ಒಂದು ಕೃತಿ.

* * *

ಶ್ರೀಮುಖ ಸಂದರ್ಶನವಾಯಿತು; ಕೊಂಚ ದೂರದಲ್ಲಿ ಐಕ್ಯಗಾನ ಕೇಳಿಸಿತು. ಸಮಕಾಲಿನ ಧ್ವನಿ ಕೇಳಿಸಿ-ವರ್ಷಗಳು ಉರುಳಿದುವು. ಆವುದೋ ಬಗೆಯ ಎಡರು-ತೊಡರುಗಳು; ಸಮಸ್ಯೆಗಳು. ಅವುಗಳೆಡೆಯಲ್ಲಿ ನೇಗಿಲ ಸಂದರ್ಶನ. ಹಿಡಿಮಣ್ಣ ಹುಡಿಯಲ್ಲಿ ಸ್ವರ್ಣಕಾಂತಿಯ ಪ್ರಾಪ್ತಿ!

ಆಗ-'ಪುನರ್ನವ'ವು-ನೇಗಿಲ ಹಿಡಿತದಲ್ಲಿ, ಬಲಗೊಂಡು ಬಂತು! ಬದುಕು ಮತ್ತೊಮ್ಮೆ ಚಿಗುರಿತು ........

ಕಯ್ಯಾರರು ಲೇಖನಿಯೆತ್ತಿದರು—ಕಾವ್ಯಶ್ರೀ ರೂಪವನ್ನು ಬರೆದರು.......

ಶಿಲೆಯಲ್ಲಿ ಶಿಲ್ಪವನ್ನು, ಮಣ್ಣಿನಲ್ಲಿ ಸ್ವರ್ಣವನ್ನು
ಅಣುವಿನಲ್ಲಿ ಮಹತ್ತನ್ನು, ಆತ್ಮನಲ್ಲಿ ಪರಮಾತ್ಮನನ್ನು
ದರ್ಶಿಸುವ ಚೇತನದ ದಿವ್ಯಾನುಭವದ ಸ್ಫೂರ್ತಿಯಿಂದ ರೈ ಹಾಡಿದರು! ಅದುವೆ 'ಚೇತನ' ಅದು ನಿಸರ್ಗದವರ, ಅಂತರಂಗದ ಅಂತಶ್ಶಕ್ತಿ, ವಿಶ್ವವ್ಯಾಪಿ!

ಶ್ರೀಮುಖ - ಐಕ್ಯಗಾನ - ಪುನರ್ನವಗಳಲ್ಲಿ ಕೇಳಿಸದ ಭಾವೋಜ್ವಲಗಳಾದ ವಿಚಾರಗಳಿಲ್ಲಿವೆ. ಇದೊಂದು ಶಾಶ್ವತ ಶಿಲ್ಪ—

**ಚೇತನದ ಚೈತನ್ಯಸಾಕ್ಷಿ!**

"ಸತ್ಯಂ - ಶಿವಂ - ಸುಂದರಂ" ಎನ್ನುವ ಕಾವ್ಯಾದರ್ಶನ ಗೌರೀಶಂಕರವನ್ನು ನಿಟ್ಟಿಸಿದ 'ಕಾಸರಗೋಡಿನ-ರೈ' ತನ್ನ ಶ್ರೀಮಂತ ಶೈಲಿಯಿಂದ 'ಚೇತನ'ವನ್ನು ಬೆಳಗಿದ್ದಾರೆ. ಒಮ್ಮೊಮ್ಮೆ ಪ್ರಶಾಂತ ಸಾಗರದಂತೆ ಮತ್ತು ಕೆಲವೊಮ್ಮೆ ಭೋರ್ಗರೆವ ಕಡಲಿನಂತೆ ತನ್ನ ಧ್ವನಿ ಮುದ್ರಿಕೆಗಳನ್ನು ರೈಗಳು ಚೇತನದಲ್ಲಿ ಅಂಕಿಸಿದ್ದಾರೆ ಆದುದರಿಂದಲೆ ಚೇತನದಲ್ಲಿ "ಸೌಂದರ್ಯ-ಗಾಂಭೀರ್ಯ"ಗಳ "ಶಾಂತಿ-ಕ್ರಾಂತಿ"ಗಳ ಹೃದ್ಯಸಂಗಮವಿದೆ.

ವಿಶ್ವ-ವಿಜಯಿೂ ಸಾಹಸದ ಕೇತು ಚೇತನಂ
ನವನವೋನ್ಮೇಷದಿಂದವತರಿಸಿದೆ
ಜನ್ಮ--ಜನ್ಮಕೆ ನವ್ಯವೀ ಚೇತನಂ ।।

ನಿಸರ್ಗದ ನಾಡಿನಾಡಿಗಳಲ್ಲಿನ ಚೇತನ ವೀಣೆಯನ್ನು ನುಡಿಸುತ್ತ ಜಾಡ್ಯದ ಮಬ್ಬನ್ನು ಹರಿದೋಡಿಸಿ, ಹೊಮ್ಮಿದ ನುಡಿಗಳಿವು "ಜನಮನದಲಿ-ಹೊಸ ಹುರುಪನ್ನು" ಬರಿಸಿದುವು!

19 ಕವನಗಳನ್ನು ಪೋಣಿಸಿಕೊಂಡ ಕೃತಿಸೂತ್ರವಿದು. ಗಾತ್ರದಲ್ಲಿ ಕೆಲವು ಹಿರಿಯವು-ಮಿಕ್ಕವು ಕಿರಿಯವು. 'ಚೇತನ'ದ ಲಕ್ಷ್ಯದ ಮುಂದೆ, ಇವುಗಳಾವುವೂ ಕಿರಿಯವಲ್ಲ.

ಉಪನಿಷತ್ ಮಂತ್ರಗಳನ್ನು ಜೀವನ ಪಾಠವಾಗಿಸಿಕೊಂಡ, ಉನ್ನತೋನ್ನತಗಳಾದ ಬೆಟ್ಟಗಳನ್ನು ಪ್ರಕೃತಿಯ ಆಡೊಂಬೊಲದಲ್ಲಿ ಸದಾ ನಿಟ್ಟಿಸಿ ಹುರುಪೇರುತ್ತಿರುವ, "ಸೀತೆ"ಯ ಮಹತ್ವವನ್ನು 'ಗೀತೆ'ಯಲ್ಲಿಯೂ ಸೆಳೆದಿರುವ ರಸಿಕ ಕವಿಕಯ್ಯಾರರು ತಾನು ಬರೆದ 'ಚೇತನ'ದಲ್ಲಿ ನಿಸರ್ಗದ ಚೈತನ್ಯವನ್ನು ರಾಮಣೀಯಕ ಶೈಲಿಯಲ್ಲಿ ತುಂಬಿರುವರು. ಉಷೆ ನಟಿ ನಲಿದು ಬರುವುದನ್ನು, ಸೃಷ್ಟಿಗೆ ಸುವರ್ಣ ವೃಷ್ಟಿಯನ್ನು ಸುರಿಸುತ್ತಿರುವ ರವಿರಾಜನನ್ನು, ವಸಂತಾಗಮ ಸಂಭ್ರಮವನ್ನು, ಮುಸಲಧಾರೆಯ ಸರಿಯನ್ನು, ರವಿಶಶಿಗಳಿಗಿರುವ ಲಕ್ಷ ನಕ್ಷತ್ರಮಾಲೆಯ ಮೆರುಗನ್ನು, ಶರದಾಗಮನ ನೈಮಲ್ಯವನ್ನು-ಕವಿ ಮನಂಬುಗುವಂತೆ ತಿಳಿಸಿದ ರೀತಿ, ಕಾವ್ಯಮಯ ಮಾತ್ರವಲ್ಲ ನಿರಂತರ ನೂತನಂ!

ಚೇತನ ಜ್ಯೋತಿಯಾದರೋ ಹೇಗಿದೆ? ಕವಿವಾಣಿಯಲ್ಲಿ.........

"ಶ್ರೀಪರಂಜ್ಯೋತಿ ಪರಮಾತ್ಮನಂಶದ್ಯುತಿಯು
ಜೀವಾತ್ಮನಂ ಬಿಡದೆ ಸ್ಪರ್ಶಿಪಂತೆ...
ಶೀಲ ಸೌಭಾಗ್ಯ-ವಿನಯ ವಿವೇಕವತಿಸತಿಯು
ಮಗಳಲ್ಲಿ ಮಾತೃತ್ವ ಬಿಂಬಿಪಂತೆ....
ಶಾಖೋಪಶಾಖ ಪ್ರಕಾಂಡದ ಮಹಾವೃಕ್ಷ
ಬೀಜದಲಿ ಸಾಜವಂ ಸೇರಿಪಂತೆ..."
(ಚೇತನಂ ಅವತರಿಸಿದೆ)

ಒಂದಕ್ಕಿಂತ ಒಂದು ಮಿಗಿಲೆಂಬಂತೆ, ಅರ್ಥಪೂರ್ಣವಾಗಿ ಹರಿದು ಬಂದ ಔಪಮ್ಯಗಳ ಸಾಧನೆಯನ್ನು 'ಚೇತನದಲ್ಲಿ' ಕಂಡರಿಯಬೇಕು.

'ಚೇತನ'ವನ್ನು ಕಂಡ ಕವಿ-

"ಪೌರುಷದ ರಾಜತೇಜದ ಮಾಮರವ ಮೆಚ್ಚಿ
ಹೆಣ್ಣೆದೆಯ ಮೋಹ ಮಲ್ಲಿಗೆಯಪ್ಪಿರೆ....
.........................
ಮಿಳಿತ ಮೇಳ ಮಧುರಂ
ಮಗು ನಗುತ ಬಂತು"........"

ಎಂದು ಹಾಡಿದಾಗ, "ನಿರಂತರ ನೂತನಂ" ಎಂಬ ಪದ ಗಳ ಹೃದಯವನ್ನು ಮನಮುಟ್ಟಿ ಕಾಣುವೆವು.

'ಚೇತನ'ದ ಪ್ರತಿಯೊಂದು ಸಾಲೂ ಹೊಸ ಹುರುಪನ್ನು ತಂದಿದೆ! ಚೈತನ್ಯ ಸಾಕ್ಷಿಯಾದ ಇನ್ನೊಂದು ಕವಿತೆ "ಉನ್ಮುಖ ವಿಲಾಸಿ" (1969ರ ಜುಲಾಯಿ ತಿಂಗಳಲ್ಲಿ ಅಪೋಲೋ ೧೧ರ ಗಗನ ಯಾತ್ರಿಗಳು ಚಂದ್ರಲೋಕಕ್ಕೆ ನೆಗುದು ಗುರಿಯನ್ನು ಮುಟ್ಟುವ ಮುನ್ನ ಬರೆದುದಿದು)

"ವಿಶ್ವ ವಿಜಯ ಸಾಹಸಕೆ-ಕವಿನಮನ ನಿನಗೆ!"

ಗೋಳ ಗೋಳಗಳ ದಾಂಟುವ ವಿಕ್ರಮದ ಮುಂದೆ ಉಬ್ಬೇರಿದ ಕವಿಯ ಎದೆಯಾಳದಿಂದ ಬಂದ ಮಾತಿದು.

ಈ ಸಾಹಸದಲ್ಲಿ ಬಿದ್ದೆಯಾದರೆ-
'ತಿಮಿ-ತಿಮಿಂಗಿಲದ ಜತೆ ಮಲಗು
ಶಾಂತಿಯೆನಿತು ಸಾವಿಂಗೆ'-....
ಸತ್ತರೆ-'ಸತ್ತರೂ ಬದುಕೆ ಅಪ್ಸರೆಯರ ಮಾಲೆ
ಹೇಡಿಗಳಿಗುಂಟೆ ಸುಖದ ತೊಟ್ಟಿಲಲಿ

ಸ್ವರ್ಗ ಸೇರುವಾ ಲೀಲೆ?'
ಎಂತಹ ಸಾಂತ್ವನ; ಎಂತಹ ಎಚ್ಚರಿಕೆ!
"ಹೊಸತು ಯುಗದ ಕರ್ತಾರ ನೀನಲ್ತೆ-
ಬರುವ ದಿನದ ವಿಭು ಗಗನ ವಿಜ್ಞಾನಿ!....

"ಎದೆಯ ಬೆಂಕಿಯೆ ಬೆಳಕಾ"ಗಿರುವ ನೀನು ಎಲ್ಲಾದರೂ
ಒಮ್ಮೆ ಬಿದ್ದೆಯಾದರೆ-
"ಬಿದ್ದಲ್ಲಿ ಬಿದ್ದು ಕೊಳೆಯಾಗಬೇಡ, ಹಂದಿಹಿಂಡಿನಂತೆ"
ಮೃಗರಾಜನೆನಿಸಿ-ಮೈಮುರಿದು ನೋಡ, ಹೋಗು
ದೂರಮುಂತೆ"

ಎಂದು ಹುರುಪನ್ನು ನೀಡಿ, "ಪಾರದರ್ಶಿಯ ತಪಶ್ಚರ್ಯೆ" ಯನ್ನು ಬೆರಳೆತ್ತಿತೋರುವ ಠೀವಿ ಧೀರವಾಗಿದೆ.

ಕವನದ ಕೊನೆಯ ಹಂತದಲ್ಲಿ ಕವಿಗಳು ಜೀವನದ ಸುತ್ತು ಮುತ್ತಲನ್ನೊಮ್ಮೆ ನಿಲುಕಿ, "ಧೈರ್ಯದಂಡ-ಹಿಡಿ ನಡೆಗು" ಎಂಬ ಮಾತನ್ನು ಸ್ಮರಿಸಿ, ಉನ್ಮುಖ ವಿಲಾಸೆಯನ್ನು ಸಮೀಪಿಸಿ, ಆತಗೆ ಮಗುತನದ ಮುದ್ರೆಯೊತ್ತಿ, "ಜೀವನ ಧರ್ಮವನ್ನು ಬೋಧಿಸಿ 'ಅಂಧಶ್ರದ್ಧೆ'ಯಿಂದ ದೂರ ಸರಿಸುವ ಸಂವಿಧಾನವದು ಮನ ನೀಯುವಿದೆ.

"ತಗ್ಗಿದವರು ಮೇಲಾಗಲಿಲ್ಲ ಮಗು
ಬಗ್ಗಿದವಗೆ ಗುದ್ದೊಂದು
ತಲೆಯೆತ್ತಿ ನಡೆ, ನೀನು ಬೆಳಕಿನೆಡೆ
ಜಾಡ್ಯ ಹೊಡೆದು ಹಾಕೆಂದು........
ಹರಕು ಮನೆಯೆಲ್ಲ ಮುರಿದು ಹೋಗಲಿ
ತೇಪೆ ಹಚ್ಚಬೇಡ
ಹೊಸತು ತಳಹದಿಯ ಕಜ್ಜ ಸಾಗಲಿ

ನಿನ್ನ ಸೃಷ್ಟ ನೋಡ....” ಎಂತಹ ವಚನಗಳು!

ರೈಗಳೊಡನೆ ಮಾತುಕತೆ ನಡೆಸಿದ ಸಂದರ್ಭದಲ್ಲಿ ನನ್ನೆದುರು ಮಿಂಚಿ ಮರೆಯಾದ ಅವರ ಹಲಕೆಲವು ಜೀವನ ಘಟಕಗಳಲ್ಲಿ ಮೇಲಿನ ಸಾಲುಗಳನ್ನು ನಾನು ಓದಿದ್ದೇನೆ.

*   *   *

ಭಾರತಕ್ಕೆ ಚೀನೀ ಆಕ್ರಮಣವಾದಾಗ ಕವನಿಸಿದುದು ‘ಯೋಧಗಾಥ’ ಇದು ಯೋಧರ ಗಾಥ--ಕವಿಕಲ್ಪಿತ ಗೀತ ಬಾಷ್ಪಾಗ್ನಿಸ್ರೋತ—ಎಂದಿದ್ದಾರೆ ಕವಿಗಳು.

ಕುಟುಂಬವೊಂದು ದೇಶ ರಕ್ಷಣೆಗಾಗಿ ಸರ್ವಸ್ವವನ್ನೂ ಸಮರ್ಪಿಸಿದ ಹೃದಯವಿದ್ರಾವಕವಾದ ಸನ್ನಿವೇಶವನ್ನು ಹಿನ್ನಲೆಯಾಗಿಸಿ ಬರೆದ ಗೀತವಿದು; ಗಾಥೆಯಿದು!

“ವೀರರ್ಗೆ ಶೂರರ್ಗೆ ಇದೆ ರಣಾಹ್ವಾನಂ” ಎಂದು ಹೊರಟ ಈ ನಾದ “ಯುದ್ಧಂ ಶರಣಂ ಗಚ್ಛಾಮಿ’ಯಾಗಲಿರುವ ಪರಿಸ್ಥಿತಿಯನ್ನು ನಿರೂಪಿಸಿ, ಬಾಷ್ಪಾಗ್ನಿ ಸ್ರೋತ”ವನ್ನು ಹರಿಯಿಸುತ್ತಿದೆ.

ಸ್ವಾತಂತ್ರ್ಯ ಕಹಳೆಯನ್ನೂದಿದರು ಗಾಂಧಿ ದೇವರು! ........ಆ ಕಾಲದಲ್ಲಿ ಒಂದೆಡೆ. ಸ್ವಾಮಿಸೆರಗನು ಹಿಡಿದು ಬಿಡದೆ ಬಂದ ಪ್ರಿಯತಮೆಯು ಕತೆಯನ್ನು ಮೊದಲಿಡುತ್ತಾಳೆ;

“ಆ ದೇವ ಕರೆದಾಗ ಈ ದೇವ ಹೊರಡಲ್ಕೆ
ಕುಂಕುಮವ ತೊಡಿಸಿದೆನು ಸ್ವಾಮಿ ಹಣೆಗೆ.......
ಬಳಸಿ ಕಾಲ್ಪಿಡಿದು ತೊದಲುವ ಕಂದ ಚಂದ್ರಮನ
ಎತ್ತಿ ತಲೆಮೂಸಿ ಕೊಟ್ಟರು ಎನ್ನ ಕೈಗೆ.......
(ಎದೆಗೊತ್ತಿದಾಗ)          ಮೊಲೆಹಾಲಿನಿಂದೊದ್ದೆ ರವಕೆ!”
‘ಹೊರಟೆ ಹೋದರು ಸ್ವಾಮಿ! ಕೊರಳುದ್ದ ಮಾಡಿದೆನು
ಹೊರಳಿ ನೋಡಲೆಯಿಲ್ಲ; ಮರಳಲಿಲ್ಲ!
(ಮೂವತ್ತು ವರ್ಷಗಳ ಬಳಿಕ)

ಕರೆ ಬಂತು ಕಾಳಗಕೆ, ಹೊತ್ತು ಹೋದನು ಹರಕೆ
ಉತ್ತರದ ಗಡಿಕಾಯೆ ನಡೆದ ಕಂದ.

ಆ ಕಂದನ—ತಾಯ್ನಾಡ ಗಡಿಕಾಯೆ ನಡೆದ ಕಂದರ-ಸಾಹಸದ ಕತೆಯನ್ನು ಹೇಳುವಾಗ, ಬೆರಗಾಗಿ ಕೇಳುತಿದ್ದ ತಾಯಿಯೇನು ಮಾಡಿದಳು?

'ಹಳೆಯ ಪಟ್ಟಿಯ ಬಟ್ಟೆಯಲಿ ಸುತ್ತಿ ಕಟ್ಟಿರುವ
ಗಂಟು ಬಿಚ್ಚಿದಳಾಕೆ ಸುರುಳಿ—ಸುರುಳಿ
(ಅದರಲ್ಲಿದೆ ನತ್ತು—ತಾಳಿ)

'ಎನಗೆ ಮಗುವ ಕಂಡಾಂತಾಯ್ತು, ಅವನೆನ್ನ ಸಂಪತ್ತು ಕೊಳ್ಳಿರೀ ಸೊತ್ತು" ಎನ್ನುತ್ತಾಳೆ; ಸಮರ್ಪಿಸುತ್ತಾಳೆ. ತ್ಯಾಗ ಮಯಿಯಾದ ಮಹಾಮಾತೆಯಿಲ್ಲಿ ಕಾಣಿಸುತ್ತಾಳೆ. ಕವನ ಕುಸುಮವಿದರ ಎಸಳು--ಎಸಳುಗಳಲ್ಲೂ "ಧರ್ಮ-ಕರ್ಮ'ದ ಆರ್ದ್ರತೆ ಹಸುರೇರಿ ನಿಂತಿದೆ. ಸತಿಯಾಗಿ ಮಾತೆಯಾಗಿ ಸ್ವಾತಂತ್ರ್ಯ ದೀಕ್ಷೆಯಲ್ಲಿ ಸಶ್ರದ್ಧವಾದ ಸ್ತ್ರೀ ಚಾರಿತ್ರ್ಯದ ಪಾವಿತ್ರ್ಯವಿಲ್ಲಿದೆ.

ಬಂಗಾರದ ಜಿಂಕೆಯ ಮರಿಯೆ
 ಕಹಿಬಾಳಿಗೆ ಸವಿ ಸವರಿರುವೆ —
 ........................

ವರುಷಕ್ಕೊಮ್ಮೆ ಹರುಷ ತರುವೆ

ಎಂಬುದಾಗಿ ಆಹ್ವಾನಿಸಿದ 'ಯುಗಾದಿ' ಗಣರಾಜೋತ್ಸವದ ರಾಷ್ಟ್ರೀಯ ಕವಿಮೇಳದಲ್ಲಿ ಹಾಡಲ್ಪಟ್ಟು ಭಾರತೀಯ ಸಂಸ್ಕೃತಿಯ ಭವ್ಯ ಪರಂಪರೆಯನ್ನು, ಯುಗಾದಿಯ ಪ್ರೌಢಿಮೆಯನ್ನು ಅಲೆ ಅಲೆಯಾಗಿ ತೇಲಿಸಿತು. ನಿಸರ್ಗದ ಸುಪ್ರಭಾತದಲ್ಲಿ, ಜೀವನದ ದ್ವಂದ್ವಗಳಲ್ಲಿ, ಧರ್ಮಾವತಾರಗಳಲ್ಲಿ 'ಯುಗಾದಿ,

ನೀಡಿದ ಜೀತನದ ಸಂದೇಶವಿಲ್ಲಿದೆ.

ನಿನ್ನೆಯ ಕಣ್ಣೀರ ಕುಡಿದು, ನೋವ ನೆನೆದು ಮರುಗದಿರಿ
ನಾಳೆಯೊಂದು ಬಾಳಿಗೆಂದು, ಬುತ್ತಿಹೊತ್ತು ತಿರುಗದಿರಿ
ನೋಯದಂತೆ ಹೊಡೆದವರು--ನೋಯದಂತೆ ತಡೆದವರು
ಸ್ವರ್ಗದಲ್ಲಿ ಬಿದ್ದವರು ನರಕದಿಂದ ಎದ್ದವರು
ಇವರು ನಡೆದ ದಾರಿ . . .
..................................
ಜೀವ ಧ್ವಜವು ಹಾರಲಿ !

'ಯುಗಾದಿ'ಯ ವಿಶ್ವ ಸಂಕೇತವು ಈ ಕವನದಲ್ಲಿ ಅಡಕವಾಗಿದೆ.

"ಇಂದು 'ಕಲ್ಯಾಣ' ನಾಳೆ 'ಕಾಳಗ'ವು
ಈ ಪ್ರಸಂಗಗಳೇ ಮರಳಿ ಮರಳಿ . . .
ಸ್ವವೈರೂಪಕದ ಸೂತ್ರ ಪಾತ್ರಗಳ ಜೋಡಿಸುವನು
ಭಗವಂತ;
ಅದರ ಪ್ರತಿಬಿಂಬ ಬಿದ್ದ ಬಯಲಾಟ
ಆಡಿಸುವನು ಭಗವಂತ . . . ಎಂದು

'ಭಾಗವತ' ಕವಿತೆಯಲ್ಲಿ ಭಗವದ್ದರ್ಶನದ ಸಮ್ಯಕ್--ಪತ್ರಿಪತ್ತಿಯನ್ನು ಸ್ಥಾಯಿಯಾಗಿಸುವ ಸಾಲುಗಳು ಕವಿಯ ತಾತ್ವಿಕ ಭಾವವನ್ನು ಕಡೆದಿರಿಸುತ್ತಿವೆ.

'ಅಜ್ಞಾತಶಿಲ್ಪಿ' ಯೊರ್ವನ ಕುರಿತು ಬರೆದ 'ಸಾವಿನಲಿ ಸವಿಯುಂಡವನು' ಕವಿತೆ, ಕಲೆಯ ಶಿಲೆಯಲ್ಲಿ ಹುದುಗಿನಿಂತ, ನೋವನ್ನು ಬಿಂಬಿಸುತ್ತಿದೆ. ಶಿಲ್ಪಿಯ ಕುರಿತು ಬರೆದ ಈ ಕವನ ಸಮಾಜದ ಕಣ್ಣನ್ನು ತೆರೆಯಿಸುತ್ತದೆ.

ಇಲ್ಲಿ ಕಾಣುವ ಶಿಲ್ಪಿ—"ಹಸಿವನ್ನೆ ತಿನ್ನುತ್ತ, ದಾಹವನೆ
ಕುಡಿಯುತ್ತ
ಬಾಳುವೆಯ ಬೇಳುತ್ತ -- ತಪದಿ ನಿಂತ"ವನು

"ಬಾಹ್ಯಬಂಧನದ ಸಂಕಲೆ ಕಡಿದೆನಾಂತರಿಕ ಪಾಶದಿಂ
ಬಿಗಿವಡೆದ-- ಬಿಡಿಸೆನ್ನ ಸೆಲೆಯು"

ಎಂಬ ಮೊರೆಯನ್ನು 'ಕೇಳಿಸುವ ಬಿಡಿಸೆನ್ನ ಸೆರೆಯು" ಗೀತವಿದು ಆಧ್ಯಾತ್ಮಿಕ ಸಂಪತ್ತನ್ನು ತುಂಬಿ ನಿಲಿಸಿದೆ.

'ಬಾಳತೇರಿದೆ-- ಬೀಳದೇರಿದೆ -- ನಡೆಸುವವ ನೀನನುದಿನ' "ಊದಿಬಿಡು ನೀ" ಗೀತದ ಧ್ವನಿಯಿದು. ಈಶ ಸಮರ್ಪಣ ಭಾವವಿಲ್ಲಿ ರಂಜಿಸಿದೆ.

**ಜೀವದರ್ಶನ : —"ವಿವೇಕಸ್ಮೃತಿ"** — 'ಕವಯೋವದಂತಿ' ಎಂಬ ಕಠೋಪನಿಷತ್ತಿನ ಮಾತನ್ನು, ನಾಂದಿಯನ್ನಾಗಿಸಿ, ಹೊರಟ 'ಚೇತನ' ಈ ಮಾತಿನ ಸಾರಸರ್ವಸ್ವವನ್ನು ಸವೆದು ರೂಪಿಸಿದ ಕವನವಿದು. ಸ್ವಾಮಿ ವಿವೇಕಾನಂದರ ಜನನಕ್ಕಿರುವ ಕಾರಣ, ಅವರ ಮಹೋನ್ನತ ವ್ಯಕ್ತಿತ್ವದ ನೆಲೆ ಇವನ್ನು ಈ ಸ್ಮೃತಿಯರಳಿಸುತ್ತಿದೆ. ಮಧ್ಯ ಮಧ್ಯದಲ್ಲಿ 'ಸಂಸ್ಕೃತ ಭಾಷೆಯಲ್ಲಿನ' ಶ್ರುತಿವಾಣಿಗಳು ಬಂದು, ಜಾಗೃತಿಯ ಸಂಜೀವಿನಿಯನ್ನು ಕೂಡುತ್ತಿರುವ ಈ ರಚನಾ ವಿನ್ಯಾಸ ಅತ್ಯಂತ ನೂತನ.

'ಪಾಷಾಣದಿ ಪೂವರಳಿತು ನಿನ್ನಮೃತ ಸ್ಪರ್ಶ
ಮೂರ್ಖತೆ ವಿನಯವನ್ನಪ್ಪಿತು ಜಯಸತ್ಯಕೆ -- ಹರ್ಷ'

ಈ ನುಡಿಗಳೇ ಸಾಕು ಆ ಸ್ಮೃತಿಯ ಸಂಪೂಜ್ಯ ಪದವಿಯನ್ನು ಗುರುತಿಸಲು !

**"ನೂರುನೂರು ಕಣ್ಣೀರು"** — ಮುದ್ದಣನಿಗಾಗಿ ಸಮರ್ಪಿತವಿದು. ತುಳುನಾಡ ಸಿರಿ, ನಂದಳಿಕೆಯ ಸೊಬಗು, ಕವಿತ್ವಕ್ಕೆ ಪುಟನೀಡಿದ ವಾತಾವರಣ ಇವೆಲ್ಲವನ್ನು ನೂತನ ಶೈಲಿಯಲ್ಲಿ ಕಾಣಿಸಿದ ಲೇಖನಿ"

"ಎಳತು ಮಾಮರದ ಹೊಸತು ಶಾಖೆಯಲಿ

ಪಂಚಮಸ್ವರದ ಗಾನ;
ಅಯ್ಯೋ! ರಣಹದ್ದು ಹೊಂಚು ಹಾಕುತಲಿ
ಒಯ್ಯೆ - ಹಾರಿತೋ ಪ್ರಾಣ!"

ಎಂದನ್ನುವಾಗ ಕವಿ ಮುದ್ದಣ್ಣನ ಜೀವನವನ್ನು ಅರಿತವರನ್ನು, ಸ್ತಂಭಿತಕಂಠರನ್ನಾಗಿಸಲು ಬೇರೆ ನಿರೂಪಣೆಯಗತ್ಯವಿಲ್ಲ

ಆತನ ಪ್ರಭುತ್ವಕ್ಕಾಗಿ ಕವಿಗಳು ನೀಡಿದ ಮನ್ನಣೆ ಕಿರಿದಲ್ಲ-

"ಪದ್ಮಾವತೀಚರಣ ಚಾರಣ ಚಕ್ರವರ್ತಿಯೆನೆ
ಹಿಗ್ಗಿ ಹಾಡಿದನೊಬ್ಬ ಜಯದೇವನು;
ಮುದ್ದಿಸಿ ಮನೋರಮೆಯ ನೀನು ಮುದ್ದಣನಾದೆ
ಪ್ರೇಮವೇ ಕಾವ್ಯಕ್ಕೆ ಜೀವವೇನು?

ಪ್ರಶ್ನೆಯ ಅಂತರಾಳ ಗೌರವಯುತವಾದುದು.

**ಲೆನಿನ್:—** ನಾಲ್ಕಾರು ಸಾಲುಗಳಲ್ಲಿ ಮೂಡಿಬಂದ ವ್ಯಕ್ತಿತ್ವದ ರೇಖಾವಿನ್ಯಾಸವಿದು. ಪೂಜ್ಯ ಗಾಂಧೀಜಿಯವರನ್ನು ತಿಳಿದ ಭಾರತೀಯರಿಗೆ, ಕವಿಗಳು ಲೆನಿನ್'ನ ಪರಿಚಯವನ್ನು ಕೊಡುವ ಮಾದರಿ . . . .

"ನಿನ್ನ ಗರಿಮೆಯನು ಗುರುತಿಸಬಲ್ಲೆ ನಾನಿಲ್ಲೆ;
ಹಿಂಸೆ ಕಳೆದರೆ ಗಾಂಧಿತಾತನದೆ ನಿನಗೆ ಬೆಲೆ."

ಸ್ಥಾನ ನಿರೂಪಣೆಯ ವೈಖರಿ ಹೃದ್ಯವಾಗಿದೆ. ಈ ಎರಡೇ ವೈಖರಿಗಳು ಸಾಕು!

**ಹೇರಾಮ:—** "ಗಾಂಧೀ ಸಮಾಧಿ"ಯನ್ನು ಸಂದರ್ಶಿಸಿದಾಗ ಉಂಟಾದ ಭಾವನೆ–ಈ ಕವನಕ್ಕೆ ಪ್ರೇರಣೆ. ಗಾಂಧೀ ಸಂದರ್ಶನ ಭಾಗ್ಯವನ್ನು, ಜನಸೇವಾಯೋಗವನ್ನು, ಪಡೆದು 'ಕ್ರಾಂತಿಯಾಗಿ ಕಿಡಿ'ಯಾಗಿ ಬಾಳಿದ್ದ ರೈಗಳು ರಾಜಘಾಟಿಗೆ ಬಂದು ಸಮಾಧಿಯ ಬಳಿ ಭಕ್ತಿಯುತರಾಗಿ ನಿಂತರು.

"ನೀ ತೋರಿದ ಪಥ ಮುಕ್ತಿಯ ಮಾರ್ಗ

ನೀ ಮಾಡಿದೆ ನರಲೋಕವ ಸ್ವರ್ಗ
ಋಷಿ ಸಂತಾನವೇ ರಕ್ಕಸರು
ಹೇ ರಾಮಾ ಇದೇ ನಿಟ್ಟುಸಿರು."

ಕೈ ಮುಗಿಯುತ ನಿಂತ ಕವಿ ಹೃದಯದಿಂದ ಸೂಸಿದ ನಿಟ್ಟುಸಿರು, ಅಹಸ್ಯವೇದನೆಯ ಪ್ರತೀಕವಾಗಿದೆ; ಪದಪದಗಳಲ್ಲೂ 'ಹೇರಾಮ'ದ ಧ್ವನಿಸಂಚಾರವಿದೆ; ಗಾಂಧೀ ದರ್ಶನದ ನೀಳ್ಗವನವಿದು.

*   *   *   *

ಮುಂದಿರುವ ಕಥನಕವನಗಳು:— "ಕಾಗಿ ನೆಲೆಯಲ್ಲಿ ಕೋಗಿಲೆಯ ಕುಹೂ" "ಮಲೆಯ ಗಜರಾಜ ಮನೆಗೆ ಬಂದಿತು". —ಇವು.

"ನಡತೆಯೆತ್ತರಿಸೆ, ನಾಡನುದ್ಧರಿಸೆ ಹೃದಯ ಗೀತೆನುಡಿದ." —"ಕನಸು ಎದೆಯು ನುಡಿದಂತೆ, ಮನವು ಮಿಡಿದಂತೆ ಕವನ ಕಟ್ಟಿದನು. ಆತನು ಹಾಡಲು ಕಲ್ಲುಕರಗುವುದು. "ಎಲ್ಲ ದಿನ ದಿಂದೆ ಇಳಿದ ಸುರರುನೋಡಿ" ಎಂದಾಡಿದವರು, ಕನಕನನ್ನು ದೂರವಿರಿಸಿದಾಗ, ಆತ "ಶರಣು ಶರಣೆ"ಂದನು; ಕೃತಾರ್ಥನಾದನು ಗತಿದಾತನನ್ನು ಪಡೆದು. ಬೃಹಸ್ಪತಿಯ ಅರಿಕೆಯಂತೆ ನಾರದ–ಪರ್ವತರು ಹರಿಯ ನಿರ್ದೇಶವನ್ನು ಪಡೆದು, ಕಾಗಿ ನೆಲೆಗೆ "ಶ್ರೀಹರಿ ಭಕ್ತಿಯನೆಲೆ"ಯನ್ನರಿಯಲು ಬರುವ ಬಗೆಯಲ್ಲಿ ಕಥನಕವನವಿದು ಹೆಣೆಯಲ್ಪಟ್ಟಿದೆ. ಕಥೆಗಿಂತ ಮಿಗಿಲಾಗಿ ಕವಿ ಆಂತರಿಕ ಶ್ರದ್ಧೆಗಾಗಿನೀಡುವ ಬೋಧನೆ. . . .

"ಕನಕನಿಗೆ ಮಂಟಪವ ಕಟ್ಟುತಿಹ ಶಿಲ್ಪಿಗಳೆ
ದೂರ ಸರಿದವರನ್ನು ಬಳಿಗೆ ಕರೆಸಿ . . .
ಕನಕನುತ್ಸವದಲ್ಲಿ ಮೆರೆಯುತಿಹ ಮಂತ್ರಿಗಳೆ
ಬಡಜನರ ಬೇಡಿಕೆಯ ಮೊದಲು ಸಲಿಸಿ . . . ."

ಭಾವಿಕರೆ—'ದುಃಖಿಗಳ ಸಂಕಟಕೆ ನೀವು ಮರುಗಿ . .'

ಪೂಜಕರೆ—'ಹೃದಯ ಕಲ್ಮಶವನ್ನು ತೊಳೆದು ಸರಿಸಿ..'

ಶ್ರೀ ಕನಕದಾಸ ಚತುಶ್ಶತಮಾನೋತ್ಸವದಲ್ಲಿ ಹಾಡಿದ ಈ ಕವನ ಕಾಲೋಚಿತವಿದ್ದು, ದಲಿತೋದ್ಧಾರದ ಕರೆ ನೀಡುತ್ತಿದೆ.

'ಮಲೆಯ ಗಜರಾಜ'ನ ಕುರಿತು ಬರೆದ ಕವನ ಭಕ್ತಿ ಭಂಡಾರಿ ಬಸವಣ್ಣನವರಿಗೆ ಸೇರುತ್ತದೆ.

"ವನದ ಕೋಗಿಲೆಯು ಮನೆಗೆ ಬಂದಿತು
ವನವ ನೆನೆದೇ ಸಂದಿತು,
ಮಲೆಯ ಗಜರಾಜ ಮನೆಗೆ ಬಂದಿತು
ಮಲೆಯ ನೆನೆದೇ ಸಂದಿತು."

ಈ ಹಿನ್ನೆಲೆಯಲ್ಲಿ ಹೆಣೆಯಲಾದ ಬಸವಣ್ಣನವರ ಜೀವನವು ಹೃದಯಸ್ಪರ್ಶಿಯಾಗಿ ಇಲ್ಲಿ ಕಾಣಿಸಿದೆ. ಕನ್ನಡ ಜೇನ್ನುಡಿಗೆ ಸಕ್ಕರೆ ಸೇರಿದಂತಿರುವ 'ವಚನ'ಗಳನ್ನು ಸೇರಿಸಿಕೊಂಡು ಬಸವಣ್ಣನ ಭಕ್ತಿ ಮಂದಿರವನ್ನು ತೆರೆದು ತೋರಿದ ಕವಿಯ ಕಥನ ಶೈಲಿ ಅತ್ಯಂತ ಸೊಗಸಾಗಿದೆ.

ಈ ಕವನಗಳೆರಡನ್ನು ಪೂರ್ಣವಾಗಿ ಓದಿದ-ಮನನ ಮಾಡಿದ ರಸಿಕನು ಕವಿಯ ಅನುಭವ ಭಂಡಾರವನ್ನು ಮೆಚ್ಚದಿರನು.

**ಅಭಿನ್ನ:** ಕರ್ಮಣ್ಯಕರ್ಮ ಯಃ ಓಶ್ಯೇತ್
ಅಕರ್ಮಣಿ ಚ ಕರ್ಮ ಯ: ಸ: ಬುದ್ಧಿಮಾನ್!

ಭಗವದ್ಗೀತೆಯ ಈ ವಾಕ್ಯವನ್ನಾಧರಿಸಿದ ಕವಿಗಳು "ಕರ್ಮ ಬೇರೆಯಲ್ಲ - ಅಕರ್ಮ ಬೇರೆಯಲ್ಲ"—ಇವೆರಡೂ 'ಅಭಿನ್ನ' ಎಂಬ ನಿರ್ಣಯವನ್ನು ಪ್ರಕೃತಿಯ ವಿವಿಧ ಗತಿಗಳಲ್ಲಿ ಗುರುತಿಸಿ, ಚೇತನವನ್ನು ಹರಿಯಿಸಿದ ಸಂವಿಧಾನ ಕೌಶಲವನ್ನು ವೀಕ್ಷಿಸಿದರೆ ಅದೊಂದು ಅಪೂರ್ವ ಕಲಾಸಿದ್ಧ ಎನ್ನಬೇಕು.

**ಅದು ಸಾಗುವ ಗುರುತಿಸುವ ದಾರಿಯಾದರೊ** —

"ಬಾನು ಬುವಿಯು ದೂರೆಂದು ದೂರುವರು ಶ್ರೀದಿಗಂತ
ಕಂಡಿಹರೆ?

..............................................................................

ಎನಿತು ರೂಪವನಿತಿದೆ ವಿರೂಪವು ಬೆಳಕು ಕತ್ತಲೆಗಳೆಂತು
ಕೃಷ್ಣವೇಣಿ ಗೌರಾಂಗಿಗೊಪ್ಪಲು ಚೆಲುವೆ ಚೆಲ್ಲಿಹುದು ಮತ್ತು
ಲಜ್ಜೆ ಮೊಗವಿರಲು ಸಜ್ಜೆಸೊಗವಿರಲು ಸತಿಯ ಬೇಟ
ರಸದೂಟ.

..............................................................................

ಕೆಂಪು ನೆತ್ತರಿನ ಮಾಂಸ ಮುದ್ದೆಯಲಿ ಕೆಚ್ಚಲೊಳಗೆ
ನೊರೆಹಾಲು.
ಗುಂಡಿ ಗೊಬ್ಬರದ ಹೊಂಡ ಗದ್ದೆಯಲಿ ಹಚ್ಚೆ ಹಸಿರು
ತೆನೆಕಾಳು.

..............................................................................

ಈ ಪ್ರಕಾರಗಳು ಈ ವಿಕಾರಗಳು ಭಿನ್ನವಲ್ಲ ಬುಡ
ವೊಂದೆ!".......

ಅದೆಷ್ಟು ವಿಸ್ತಾರವಾಗಿದೆ! ಕವನವಿದು ಚಿಕ್ಕದಾದರೂ ಭಾವ ಬಂಧುರವಿದ್ದು, ಕವಿಯ ಆಳವಾದ ಸೂಕ್ಷ್ಮತೆಗೆ-ಮತ್ತು-ಪ್ರತಿಭೆಗೆ ಸಂಭಾವನೆಯಾಗಿದೆ.

"ಗೆಲುವ ಕಾಲವೀ ಶರದು-ಜೀವ ಜೀವನಕೆ ಸುಖವು" ಎಂಬ ಔದಾರ್ಯದ ಹಿಡಿತದಲ್ಲಿ ನದಿಸಿದ 'ಶರದ್ಗಾನ'ವನ್ನು 'ತೈತ್ತರೀಯಾರಣ್ಯ'ಕದ ಮಂತ್ರದೊಂದಿಗೆ ಕೇಳಿದ ನಾವು ಮುಂದೆ 'ಚೇತನ'ದಲ್ಲಿ 'ತೋರು ಬೆಳಕು, ಸಂಹಿತೆ, ಶಾಂತಿ ಮಂತ್ರ'ಗಳೆಂಬ ಉಪನಿಷತ್ತ್-ಗಾನಗಳನ್ನು ಸವಿಯುತ್ತೇವೆ.

ಉಪನಿಷತ್ತಿನ ಮೇಲೆ ತನಗಿರುವ ಅಭಿಮಾನವನ್ನು, ಆಯ್ಕೆಯಲ್ಲೂ ಸಮಾವೇಶಗೊಳಿಸಿದ್ದಾರೆ.

ಉಪನಿಷನ್ಮಂತ್ರಗಳನ್ನು ಕನ್ನಡ ಕುಲಕ್ಕೆ ಈ ಬಗೆಯಲ್ಲಿ ಅನುವದಿಸಿ ಕೊಡುತ್ತಿರುವ ಈ ಸತತಾಭ್ಯಾಸಿಗಳಾದ ವಿದ್ವಾಂಸರು "**ಪಂಚವಿೂ**" ಎಂದು ತಾನು ಬರೆಯುತ್ತಿರುವ ಬೃಹದ್ಗ್ರಂಥದಲ್ಲಿ ಉಪನಿಷತ್ತುಗಳ ಕುರಿತು ಸುವ್ಯಕ್ತ ವ್ಯಾಖ್ಯಾನವನ್ನು ಕೊಡಲಿರುವೆನೆಂದು, ನನ್ನಲ್ಲಿ ತಿಳಿಸಿದಾಗ ಆ ಸಾಧಕನನ್ನು ವಂದಿಸಿದೆ.

**ಇವನ್ನಲ್ಲದೆ—**

ರೈಗಳು, ಕಿರುಕಂದಮ್ಮಗಳಿಗಾಗಿ 'ಪದ್ಯಮಂಜರಿ'ಯೆಂಬ ಪುಸ್ತಕವನ್ನೂ ಬರೆದಿದ್ದಾರೆ. ಮಕ್ಕಳ ಮನಸನ್ನು ಸುಲಭವಾಗಿ ಸೆಳೆಯಬಲ್ಲ, ನೈತಿಕ--ಬೌದ್ಧಿಕಶಕ್ತಿ ಸಂಪನ್ನಗಳಾದ ಗೀತಗಳವುಗಳಲ್ಲಿದ್ದು ಹೃದ್ಯವಾಗಿದೆ. ಮಕ್ಕಳ ಕಲ್ಪನಾ ವಿಲಾಸಕ್ಕೆ ಅದೊಂದು ತೂಗುಯ್ಯಾಲೆಯೆನ್ನಬಹುದು—

**ಸಾಧನೆ**—

ತನ್ನೂರಾದ ಬದಿಯಡ್ಕದಲ್ಲಿ 'ಬುನಾದಿ ಮಾಧ್ಯಮಿಕ ಶಾಲೆ'ಯು ಸ್ಥಾಪಿತವಾದೊಡನೆ, ಅತ್ಯಾನಂದಗೊಂಡ ಕಯ್ಯಾರರು, 'ಬುನಾದಿ'-ಶಿಕ್ಷಣಪದ್ಧತಿಗನುಗುಣವಾಗಿ 'ನವೋದಯ ಪಾಠಮಾಲೆ'ಯೆಂಬ ಪಠ್ಯವನ್ನು ಬರೆದರು. ಒಂದರಿಂದ ಐದನೆಯ ತರಗತಿಯ ವರೆಗಣ ಮಕ್ಕಳಿಗೆ ಒಪ್ಪುವಂತೆ ಬರೆದ ಈ ಪಠ್ಯಗಳು ಕರ್ಣಾಟಕದ ಹಲವೆಡೆ ಮತ್ತು ಕೇರಳದ ಕನ್ನಡ ಶಾಲೆಗಳಲ್ಲಿ ಬಳಕೆಯಲ್ಲಿದ್ದುವೆಂಬುದೂ ಮನನೀಯವಿದೆ.

ಸ್ವತಃ ಭಾಷಾಧ್ಯಾಪಕರೂ—ವಿದ್ವಾಂಸರೂ ಆದ ಈ ಮಹನೀಯ ಮಕ್ಕಳಲ್ಲಿ 'ಸ್ವತಂತ್ರ ರಚನಾ ಕೌಶಲ' 'ಭಾಷಾಶುದ್ಧಿ' ಮೊದಲಾದುವನ್ನು ಲಕ್ಷಿಸಿ ಅತ್ಯಂತೋಪಯುಕ್ತಗಳಾದ

'ವ್ಯಾಕರಣ ಮತ್ತು ಪ್ರಬಂಧ'ಗಳು ಎಂಬ ಪಠ್ಯಪೋಷಕ ಪುಸ್ತ
ಗಳನ್ನು ಬರೆದಿರುವರು.

" * *

ಇವಿಷ್ಟು ಸ್ವತಂತ್ರ ಕೃತಿಗಳ ಮಾತಾಯಿತು. ರೈಗ
ಅನೇಕ ಕವನಗಳು ಮಲೆಯಾಳ-ಹಿಂದಿಗಳಲ್ಲಿ ಅನೂದಿತವಾಗಿ
ತನ್ನ ನೆಲಕ್ಕೆ ಹೊಂದಿ ನಿಂತ ಕೇರಳದ ಸಾಹಿತ್ಯ ಸಂಪತ್ತನ
ಕಂಡು, ವಿದ್ಯಾರ್ಥಿಗಳಿರುವಾಗಲೇ ಹಿಗ್ಗಿ ನಲಿದಿದ್ದ ರೈಗಳು,
ದಿನಗಳಲ್ಲಿ ಖ್ಯಾತ ಮಲೆಯಾಳ ಕವಿಗಳ ಕವನಗಳನ್ನು, ಕಥ
ಗೀತಗಳನ್ನು, ತಾನು ಮೆಚ್ಚಿದಂತೆ ಭಾಷಾಂತರಿಸುತ್ತಿದ್ದಾರೆ.

ಈ ಸಾಹಸ "ಕನ್ನಡಕ್ಕೆ ಒದಗಿಸಿಕೊಟ್ಟ ಕವನಗ
ಕೆಲವು ಸಾಲುಗಳನ್ನು ಕೇಳಿದ್ದೇನೆ. ಅವು ರಮ್ಯವಾಗಿ
ಮೂಲದ ಆಶಯುವನ್ನು ಸುಶಕ್ತವಾಗಿ ನೀಡಿವೆ.

* * *

ಜೀವನದಲ್ಲಿ 'ವಿಶ್ರಾಂತಿ'ಯ ಮುಖವನ್ನೆ ಬಯಸ
"ನೇಗಿಲ ದಾರಿಯಲ್ಲಿ" 'ಅಧ್ಯಾಪನ ವೃತ್ತಿ'ಯಲ್ಲಿ, 'ಸಮಾ
ಸೇವೆಯಲ್ಲಿ' ತೃಪ್ತಿಯನ್ನುಣ್ಣುತ್ತಿರುವ ಕಯ್ಯಾರ ಕಿಞ್ಞ
ರೈಗಳಿಂದ ಈ ನೆಲಕ್ಕೆ ಪ್ರಯೋಜನ ದೊರಕುವಂತಾಗಲ
ಕನ್ನಡಿಗರ ಕೈಬಿಟ್ಟ ಕಾಸರಗೋಡು ತಿರುಗಿ ಕನ್ನಡದ ಮಡಿಲ
ಸೇರುವಂತಾಗುವ ಭಾಗ್ಯವನ್ನು ಇವರ ಸಾಧನೆ ಬಳಿತರಲ
ಆದೇ ಆಸೆ.

"ರಾಷ್ಟ್ರ ಪ್ರಶಸ್ತಿ"ಯಿಂದ—ರಾಷ್ಟ್ರ ಗೌರವವನ್ನು ಪಡೆ
'ಮೈಸೂರು ಸಾಹಿತ್ಯ ಅಕೆಡಮಿ'ಯ ಪ್ರಶಸ್ತಿಯಿಂದ, ಕನ್ನ
ನಾಡಿನ ಮನ್ನಣೆ ಗಳಿಸಿ—ಧನ್ಯವಾದ 'ರೈ' ಜೀವನ ನಾ
ನುಡಿಗಳ ಸತ್ಸೇವೆಯನ್ನು ಮಾಡುವ ಪುಣ್ಯಕರ್ಮದಲ್ಲಿ ಸುಶ
ವಾಗಿರಲಿ.

# ರೈಗಳ ಕೃತಿಗಳು

ಕವನ — ಶ್ರೀಮುಖ
ಐಕ್ಯಗಾನ
ಪುನರ್ನವ—[ಮೈಸೂರು ಸರಕಾರದಿಂದ ಬಹುಮಾನಿತ]
ಚೇತನ
ಪಂಚಮಿ [ಅಚ್ಚಿನಲ್ಲಿ]

ಶಿಶುಗೀತೆ — ಪದ್ಯ ಮಂಜರಿ [ಎರಡು ಭಾಗಗಳು]

ಕಥೆ — 'ಅನ್ನದೇವರು ಮತ್ತು ಇತರ ಕಥೆಗಳು'

ಪದ್ಯದಿಂದ ಗದ್ಯಕ್ಕೆ:–'ಲಕ್ಷ್ಮೀಶನ ಕಥೆಗಳು'

ಜೀವನ — 'ರತ್ನರಾಶಿ' —[ಮದರಾಸು ಸರಕಾರದಿಂದ ಬಹುಮಾನಿತ ]

ಕಿರು-ನಾಟಕ — 'ವಿರಾಗಿಣಿ'

ವಿಮರ್ಶೆ — 'ರಾಷ್ಟ್ರಕವಿ ಗೋವಿಂದ ಪೈ'

ಪಠ್ಯ — 'ನವೋದಯ ಪಾಠಮಾಲೆ'— ತರಗತಿ
1ರಿಂದ 5 ಸ್ವತಂತ್ರ
6ರಿಂದ 8 ಸಂಯುಕ್ತ

ವ್ಯಾಕರಣ — ವ್ಯಾಕರಣ ಮತ್ತು ಪ್ರಬಂಧಗಳು [ನಾಲ್ಕು ಭಾಗಗಳು ]

ಕನ್ನಡ ಕೋಶ — [ ಸಿದ್ಧವಾಗಲಿದೆ ]

---

* 'ನವೋದಯ ಪಾಠಮಾಲೆ'— ಒಂದರಿಂದ ಐದನೆಯ ತರಗತಿಯ ವರೆಗೆ. ಈ ಪಾಠಮಾಲೆ ರೈಗಳದ್ದೇ ಆಗಿದೆ.

* ಆರರಿಂದ ಎಂಟರವರೆಗೆ ಶ್ರೀ ಪದ್ಮನಾಭ ಸೋಮಯಾಜಿ ಅವರೂ ಜತೆಗಿದ್ದು ವಿರಚಿತ.

# ನವೋದಯ
# ಪ್ರಚಾರ ಪುಸ್ತಕ ಮಾಲೆ

ಕಲಾವಿದ ಕೃಷ್ಣ ಹೆಬ್ಬಾರರು
ಬೇಂದ್ರೆ
ಕಾರ್ಲ್ ಮಾರ್ಕ್ಸ್
ಶಿವರಾಮ ಕಾರಂತ
ಶ್ರೀ ಪು. ತಿ. ನರಸಿಂಹಾಚಾರ್ಯರು
ಟಿ. ಎಸ್. ಈಲಿಯಟ್
ಮಾಸ್ತಿ ವೆಂಕಟೇಶ ಅಯ್ಯಂಗಾರ್
ಕಡೆಂಗೋಡ್ಲು ಶಂಕರ ಭಟ್ಟರು
ಶ್ರೀರಂಗ
ಅ. ನ. ಕೃಷ್ಣರಾಯರು
ಬದುಕುವ ದಾರಿ
ಶ್ರೀ ಕೃಷ್ಣ ದೌತ್ಯ
ಶ್ರೀ ಪುರಂದರ ದಾಸರು
ಸೇಡಿಯಾಪು ಕೃಷ್ಣ ಭಟ್ಟರು
ಮುದ್ದಣ
ಗೋವಿಂದ ಪೈ ಕಾವ್ಯಗಳು
ವಿ. ಸೀ.
ಹುರುಳಿ ಭೀಮರಾಯರು
ಉಗ್ರಾಣ ಮಂಗೇಶರಾಯರು
ಕನ್ನಡ ಕಟ್ಟಿದವರು
ಮುಳಿಯ ತಿಮ್ಮಪ್ಪಯ್ಯ
ಎಸ್. ವೆಂಕಟರಾಜ
ಪಂಜೆ ಮಂಗೇಶರಾಯರು
ಕೈಯಾರ ಕಿಞ್ಞಣ್ಣ ರೈ

---

ಉದಯ ಪ್ರೆಸ್, ಮಂಗಳೂರು-3.